# ತಂಬ್ರಹಳ್ಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಎಂ.ಫಿಲ್. ಪ್ರಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ: ೧೮೦೧೦೮೦೩೦೦೧೭





ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೧೯

# ತಂಬ್ರಹಳ್ಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಎಂ.ಫಿಲ್. ಸಂಪ್ರಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ: ೧೮೦೧೦೮೦೩೦೦೧೭



ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೯

# ಪರಿವಿಡಿ

## ಅಧ್ಯಾಯ – ಒಂದು

# ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಅಧ್ಯಯನದ ಸ್ವರೂಪ

೧.೫ ಅಧ್ಯಯನದ ಸಮೀಕ್ಷೆ

# ಅಧ್ಯಾಯ-೧

**ಪ್ರಸ್ತಾವನೆ:**

ಭಾರತ ಚರಿತ್ರೆಯ ಬರವಣಿಗೆಯಲ್ಲಿ ಕೇವಲ ಪ್ರಬಲ ರಾಜಮನೆತನಗಳ ಮತ್ತು ಸಾಮಂತರುಗಳ ಸಂಗತಿಗಳು ಹೆಚ್ಚು ದಾಖಲಾಗಿವೆ. ಮುಖ್ಯವಾಗಿ ಮೇಲುಸ್ತರದ ಪ್ರಭುತ್ವ ಕೇಂದ್ರಿತ ಅಂಶಗಳನ್ನೇ ಹೆಚ್ಚಿನ ಪ್ರಮಾಣದಲ್ಲಿ ಪ್ರತಿಬಿಂಬಿಸಲಾಗಿದೆ. ಈ ರೀತಿಯ ಚರಿತ್ರೆ ಬರವಣಿಗೆಯ ಕ್ರಮದಿಂದ ಕರ್ನಾಟಕ ಚರಿತ್ರೆಯೂ ಕೂಡ ಹೊರತಾಗಿಲ್ಲ. ಕೆಳಸ್ತರದ ಜನಸಾಮಾನ್ಯರ ಹಾಗೂ ಸಮಾಜದ ಅಂಚಿನಲ್ಲಿರುವ ಇಂತಹ ಹತ್ತು ಹಲವು ಅಂಶಗಳು ಚರಿತ್ರೆ ಬರವಣಿಗೆಯಲ್ಲಿ ನಿರ್ಲಕ್ಷಕ್ಕೆ ಒಳಗಾಗಿವೆ. ಅವುಗಳಲ್ಲಿ ಸ್ಥಳೀಯ ಚರಿತ್ರೆಯೂ ಒಂದಾಗಿದೆ. ಚರಿತ್ರೆ ಪ್ರಭಾವಿ ಬರಹಗಳು ಸ್ಥಳೀಯ ಚರಿತ್ರೆಯನ್ನು ರಚಿಸಲು ಅನುವು ಮಾಡಿಕೊಡದಿರುವುದು. ವಿಶಾಲ ವ್ಯಾಪ್ತಿಯ ಅಧ್ಯಯನಗಳಿಗೆ ತೊಡಕಾಗಿಯೂ ಪರಿಣಮಿಸಿವೆ. ಈ ಹಿನ್ನಲೆಯಲ್ಲಿ ಒಂದು ಪ್ರದೇಶದ ಕುರಿತಾದ ಎಲ್ಲಾ ಆಯಾಮಗಳನ್ನು ಒಳಗೊಂಡ ಅಧ್ಯಯನದ ಅವಶ್ಯಕತೆ ಇದೆ.

ಮಾನವ ಹುಟ್ಟಿನಿಂದ ಅವನ ಸರ್ವ ವಿಕಾಸಗಳ ವೈಶಿಷ್ಟ್ಯತೆ ಮತ್ತು ಸತ್ಯಾ ಸತ್ಯತೆಯಿಂದ ಕೂಡಿದ ಘಟನಾವಳಿಗಳನ್ನು ವಾಸ್ತವಕ್ಕೆ ಹತ್ತಿರವಾಗಿ ರೂಪಿಸುವುದು. ಪ್ರಮಾಣಬದ್ಧ ದಾಖಲೆಯಾಗಿದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಈಗಾಗಲೇ ಒಪ್ಪಿತವಾದ ಚರಿತ್ರೆಯು ಪ್ರಭುತ್ವದ ವೈಭವಿಕೃತ ಇತಿಹಾಸವನ್ನು ರಚಿಸುವಲ್ಲಿ ಆದ್ಯತೆ ನೀಡಿರುವುದು ಅವರ ಬರವಣಿಗೆಯ ಕ್ರಮಗಳಿಂದ ತಿಳಿಯುತ್ತದೆ. ಅಂತಹ ಕೊರತೆ ನೀಗಿಸಲು ಸ್ಥಳೀಯ ಮತ್ತು ಗ್ರಾಮ ಚರಿತ್ರೆಯ ವಿವರಗಳನ್ನು ವಿಶಾಲ ತಳಹದಿ ಚರಿತ್ರೆ ಅಧ್ಯಯನಗಳಿಗೆ ಕೇಂದ್ರಿಕರಿಸಿ ಕಟ್ಟಿಕೊಡುವ ಪ್ರಯತ್ನಗಳು ಇತ್ತೀಚಿನ ದಿನಗಳಲ್ಲಿ ನಡೆಯುತ್ತಿವೆ. ಈವರೆಗೂ ರಾಜಮನೆತನಗಳ, ಸಾಮಂತರ, ಪ್ರಬಲ ವರ್ಗದವರ ಅಧಿಕಾರಿ ವರ್ಗಗಳ ಸಂಗತಿಗಳು ಪ್ರಧಾನವಾಗಿ ಚರಿತ್ರೆಯಲ್ಲಿ ಕೇಂದ್ರೀಕೃತವಾಗಿರುವುದನ್ನು ಕಾಣುತ್ತೇವೆ. ಇಂತಹ ಪರಿಣಾಮಗಳಿಂದಾಗಿ ಸಮಾಜದ ಅಂಚಿನಲ್ಲಿರುವ ಸಾಮಾನ್ಯ ಜನರ ಚರಿತ್ರೆ ವಿವರಗಳನ್ನು ದೂರವಿಡಲಾಗಿದೆಯೆಂದು ಅಭಿಪ್ರಾಯಿಸಬಹುದು. ಅಲ್ಲದೆ ಅದೇ ವೇಳೆಗೆ ಇಂತಹ ಬಹುಮುಖ್ಯವಾದ ತೊಡಕುಗಳನ್ನು ನಿವಾರಿಸಲು ಇತ್ತೀಚಿನ ದಿನಗಳಲ್ಲಿ ಇತಿಹಾಸದ ಬರವಣಿಗೆಯ ಕ್ರಮಗಳು ಬದಲಾಗುತ್ತಿವೆ ಎಂಬುದು ಅಷ್ಟೇ ಆರೋಗ್ಯಕರವಾದುದು. ಇಂಥ ಉದ್ದೇಶಗಳನ್ನು ಒಳಗೊಂಡಂತೆ ಪ್ರಸ್ತುತ ಅಧ್ಯಯನ ಪೂರೈಸುವ ಪ್ರಯತ್ನ ಮಾಡಲಾಗಿದೆ.

ಬದಲಾವಣೆಗೊಂಡ ಕಾಲಘಟ್ಟಗಳಲ್ಲಿ ರಾಜಪ್ರಭುತ್ವದ ಆಳ್ವಿಕೆ, ಅವರ ಜೀವನ ಮತ್ತು ಸಾಧನೆಗಳನ್ನೇ ಉಜ್ವಲಿಸಿದ ರಾಷ್ಟ್ರದ, ರಾಜ್ಯದ ಘಟನೆಗಳೆಂಬಂತೆ ಅವುಗಳು ಸರ್ವಕಾಲಿಕ ಸತ್ಯ ಎಂಬಂತೆ ಚರಿತ್ರೆಯಲ್ಲಿ ನಿರೂಪಿಸಲಾಗಿದೆ. ಅಲ್ಲದೆ ಮೇಲುಸ್ತರದ ಸಂಸ್ಕೃತಿಗಳ ಕುರಿತು ಇರುವ ಬರವಣಿಗಳಲ್ಲಿ ಸ್ಥಳೀಯ ಸಂಸ್ಕೃತಿ ಹಾಗೂ ಚರಿತ್ರೆಯ ಸೂಕ್ಷ್ಮ ಘಟನೆಗಳನ್ನು ಪ್ರಸ್ತುತದಲ್ಲಿ ನೋಡಬೇಕಾಗಿದೆ. ಇತಿಹಾಸ ಅಧ್ಯಯನದ ಚೌಕಟ್ಟಿನೊಳಗೆ ಚರಿತ್ರೆಯನ್ನು ಹೊಸದಾಗಿ ಕಟ್ಟುವುದು. ಇತಿಹಾಸಕಾರನ ಮೇಲಿರುವ ಮುಖ್ಯ ಜವಾಬ್ದಾರಿಯಾಗಿದೆ. ಈ ಹಿನ್ನಲೆಯಲ್ಲಿ ನಿರ್ಲಕ್ಷಕ್ಕೆ ಒಳಪಟ್ಟಿರುವ ತಂಬ್ರಹಳ್ಳಿ ಪರಿಸರದ ಚರಿತ್ರೆಯನ್ನು ಕಟ್ಟುವ ಅವಶ್ಯಕತೆಯಿದ್ದು **"ತಂಬ್ರಹಳ್ಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯಡಿಯಲ್ಲಿ ಸ್ಥಳೀಯ ಚರಿತ್ರೆಯ ವಿವಿಧ ಆಯಾಮಗಳ ಮೂಲ ತಂಬ್ರಹಳ್ಳಿ ಪಟ್ಟಣವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಬರುವ ಗ್ರಾಮ ತಂಬ್ರಹಳ್ಳಿ. ಇದು ಹಗರಿಬೊಮ್ಮನಹಳ್ಳಿಯಿಂದ ಹದಿನೇಳು ಕಿ.ಮೀ ದೂರದ ಉತ್ತರ ಭಾಗದಲ್ಲಿದೆ. ತಂಬ್ರಹಳ್ಳಿಯು ತುಂಗಭದ್ರ ಅಣೆಕಟ್ಟಿನ ಹಿನ್ನಿರಿನ ದಂಡೆಯಲ್ಲಿದೆ. ಈ ಗ್ರಾಮದ ಉತ್ತರಕ್ಕೆ ಒಂದು ಕಿ.ಮೀ ದೂರದಲ್ಲಿ ರಂಗನಾಥ ಗುಡ್ಡ (ರಂಗಪ್ಪನ ಗುಡ್ಡ) ಇದೆ. ಹಾಗೆಯೇ ಮುಂದೆ ಕಿತ್ತೂನೂರು, ರಾಮೇಶ್ವರ ಬಂಡಿ, ತೆಲುಗೋಲಿ, ಮುತ್ಕೂರು ಮೊದಲಾದ ಗ್ರಾಮಗಳು ತುಂಗಭದ್ರ ನದಿಯ ದಡದಲ್ಲಿವೆ. ಉತ್ತರದ ಎಡಭಾಗಕ್ಕೆ ಸೀಗನಹಳ್ಳಿಯ ಉಪಗ್ರಾಮಗಳು (೧,೨,೩,) ಬನ್ನಿಗೋಳ ತಂಬ್ರಹಳ್ಳಿಗೆ ಪಶ್ಚಿಮಕ್ಕೆ ಕೃಷ್ಣಾಪುರ, ಬಸರಕೋಡು, ವಣಗಿ ಈ ಗ್ರಾಮಗಳಿವೆ. ದಕ್ಷಿಣಕ್ಕೆ ಚಿಲುಗೋಡು, ಯಡಾಮನಹಳ್ಳಿ, ಹಿರೆಸೂಬಟೆ ಹಗರಿಕ್ಯಾದಿಗಿಹಳ್ಳಿ, ಬಾಚಿಗೊಂಡನಹಳ್ಳಿ ಗ್ರಾಮಗಳು ಕಂಡುಬರುತ್ತವೆ. ತಂಬ್ರಹಳ್ಳಿಯ ಸುತ್ತಲು ತುಂಗ ಭದ್ರಾ ನದಿ ನೀರು ಇರುವುದರಿಂದ ಇದು ರೀತಿಯ ದ್ವೀಪದ ಪ್ರದೇಶದಂತಿರುವ ಒಂದು ರೀತಿಯಲ್ಲಿ ದ್ವೀಪದ ಪ್ರದೇಶದಂತಿರುವ ಹಳ್ಳಿಯಾಗಿದೆ.

ತುಂಗಭದ್ರ ಹಿನ್ನೀರಿಗೆ ಮುಳುಗಡೆಯಾಗಿರುವ ಹಳ್ಳಿಗಳಲ್ಲಿ ತಂಬ್ರಹಳ್ಳಿಯೂ ಒಂದು. ಮುಳುಗಡೆ ಡಿಸೋಜ ಎಂದೇ ಹೆಸರಾಗಿರುವ ನಾ. ಡಿಸೋಜ ಅವರ 'ಮುಳುಗಡೆ' ಕಾದಂಬರಿಯಲ್ಲಿ ತಂಬ್ರಹಳ್ಳಿ ಜನರ ಅನುಭವಿಸಿದ ದೈನಂದಿನ ಕಷ್ಟ-ಸುಖಗಳ ಓದಿದರೆ ನಮ್ಮೂರ ಜನ ಅನುಭಬಿಸಿದ ಕಷ್ಟ ನೆನಪಾಗುವುದು. ಒಂದು ಕಾಲದಲ್ಲಿದ್ದ ಸಾಂಸ್ಕೃತಿಕ ಬದುಕು ನಶಿಸಿ ಆ ಜನಪದರ ಬದುಕು ಕಳಚಿ ಹೋಯಿತೇನೋ ಎಂದೆನಿಸುತ್ತದೆ.

ಪುರಾಣದಲ್ಲಿ ಹೇಳುವಂತೆ ತಂಬ್ರಹಳ್ಳಿ 'ತಾಮ್ರಧ್ವಜ' ಎಂಬ ರಾಜನ ರಾಜಧಾನಿ. ಇದು ಧರ್ಮ ರಾಜನ ಕಾರ್ಯಕ್ಷೇತ್ರವಾದ್ದರಿಂದ ಧರ್ಮ ರಾಜನು ಪಾಪವನ್ನು ಕಳೆದುಕೊಳ್ಳಲು ಋಷಿಗಳ ಆದೇಶದಂತೆ

ಅಶ್ವಮೇಧಯಾಗವನ್ನು ಮಾಡಲು ಅಣಿಯಾದನಂತೆ, ಅದೇ ಸಮಯದಲ್ಲಿ ತಂಬ್ರಹಳ್ಳಿಯ ತಾಮ್ರಧ್ವಜನು ತನಗೆ ಶ್ರೀ ಕೃಷ್ಣ ದರ್ಶನವಾಗಲ್ಲಿಲ್ಲವೆಂದು ವ್ಯಥೆಪಡುತ್ತಿದ್ದನಂತೆ. ಅಶ್ವಮೇಧಯಾಗದ ಕುದುರೆ ಹಿಂದೆ ಪರಮವೀರನೆಂಬ ಅರ್ಜುನ ಬಂದಿದ್ದನು. ಈ ಅರ್ಜುನನ್ನು ಸೋಲಿಸಿದರೆ ಶ್ರೀಕೃಷ್ಣ ಪರಮಾತ್ಮ ಅಲ್ಲಿಗೆ ಬಂದೇ ಬರುವನೆಂದು ತಿಳಿದು ತಾಮ್ರಧ್ವಜನ ಅರ್ಜುನನ್ನು ಸೋಲಿಸಿದನಂತೆ ಆಗ ಅಲ್ಲಿ ಶ್ರೀಕೃಷ್ಣ ಪರಮಾತ್ಮನು ತಾಮಗರ ಧ್ವಜನಿಗೆ ದರ್ಶನ ಕೊಟ್ಟನಂತೆ ತನ್ನ ಇಚ್ಚೆಯನ್ನು ಈಡೇರಿಸಿದನೆಂದು ತಾಮ್ರ ಧ್ವಜನು ದ್ವೇಷವನ್ನು ಬಿಟ್ಟು ಆಶ್ವಮೇಧ ಕುದುರೆ ಹಿಂದೆ ಕಾವಲು ಹೊರಡುತ್ತಾನೆ. ಈ ತಾಮ್ರಧ್ವಜವು ಪೊಟ್ಟಣವೇ ತಂಬ್ರಹಳ್ಳಿಯಾಗಿದೆ. ಇಲ್ಲಿಯೇ ದರ್ಶನವನ್ನು ಕೊಟ್ಟರುವುದರಿಂದ ಶ್ರೀಕೃಷ್ಣ ಪರಮಾತ್ಮನೇ ತಂಬ್ರಹಳ್ಳಿಯ ಗುಡ್ಡದಲ್ಲಿ ರಂಗಸ್ವಾಮಿಯಾಗಿ ಶ್ರೀಕೃಷ್ಣ ಉದ್ಭವಾದನಂತೆ ಈ ತಾಮಗರಧ್ವಜನ ರಾಜಧಾನಿಯಾದ ತಾಮಗರಪುರವೇ ಈ ತಂಬ್ರಹಳಿ ಎಂಬುದು ಸ್ಥಳೀಯ ಅಭಿಪ್ರಾಯವಾಗಿದೆ.

ಒಂದು ಸಂಸ್ಕೃತಿಯಿಂದ ಹೊಸದಾದ ಇನ್ನೊಂದು ಸಂಸ್ಕೃತಿಗೆ ಬಂದ ಹೊಸ ಬದುಕು ಸೃಷ್ಟಿಗೊಂಡು ತಮ್ಮ ನಡೆ–ನುಡಿ, ಆಚಾರ–ವಿಚಾರಗಳಲ್ಲಿ ಕೊಂಚ ಬದಲಾವಣೆಯೊಂದಿಗೆ ಜನಪದ ಸಂಸ್ಕೃತಿ ಇಲ್ಲಿ ಮರು ಹುಟ್ಟು ಪಡೆಯಿತ್ತು. ದೈನಂದಿನ ಜೀವನದಲ್ಲಿ ಜನಪದ ಸಂಸ್ಕೃತಿಯನ್ನು ಕಟ್ಟಿಕೊಳ್ಳುವಲ್ಲಿ ಹಲವಾರು ರೀತಿಯ ಹೋರಾಟವನ್ನು ನಮ್ಮ ಊರಿನ ಜನರು ಎದುರಿಸುತ್ತಿದ್ದಾರೆ ಸಂಸ್ಕೃತಿಯ ಮೌಲ್ಯವನ್ನು ಕಟ್ಟುಕೊಳ್ಳುತ್ತಲೇ ತಮ್ಮದೇ ಆದ ಅನನ್ಯತೆಯನ್ನು ಕಂಡುಕೊಂಡಿದ್ದಾರೆ.

**೧.೧ ಅಧ್ಯಯನದ ಉದ್ದೇಶಗಳು:**

ಪ್ರಸ್ತುತ ಕಾಲದಲ್ಲಿ ಚರಿತ್ರೆಯ ಗ್ರಹಿಕೆಗಳಿಂದ ಮಾನವನ ಗ್ರಹಿಕೆಗಳು ಕೂಡ ಬದಲಾಗುತ್ತಿವೆ. ಪ್ರತಿಯೊಂದು ಪ್ರದೇಶಕ್ಕೂ ತನ್ನದೇ ಆದ ವಿಶಿಷ್ಟವಾದ ಚರಿತ್ರೆ ಇದ್ದೇ ಇರುತ್ತದೆ. ಸ್ಥಳೀಯ ಚರಿತ್ರೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಉತ್ತಮ ಫಲಿತಾಂಶಗಳು ವ್ಯಕ್ತವಾಗುವುದಲ್ಲದೆ ಅವುಗಳ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ನಿಚ್ಚಳವಾಗಿ ಕಂಡುಬರುತ್ತವೆ. ಇಂತಹ ಇತಿಹಾಸದ ಅಧ್ಯಯನ ಕೈಗೊಳ್ಳುವಾಗ ಚಾರಿತ್ರಿಕ ದೃಷ್ಟಿಯಿಂದ ಪರಿಶೀಲಿಸುವುದು ಉಪಯುಕ್ತವೆನಿಸುತ್ತದೆ. ಈ ಹಿನ್ನಲೆಯಲ್ಲಿ ಅಧ್ಯಯದಲ್ಲಿ ಕೆಳಕಂಡ ಉದ್ದೇಶಗಳನ್ನು ನಿರೂಪಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ತಂಬ್ರಹಳ್ಳಿಯ ಪರಿಸರದ ಒಟ್ಟಾರೇ ಸಾಂಸ್ಕೃತಿಕ ಸಂಗತಿಗಳನ್ನು ವ್ಯವಸ್ಥಿತವಾಗಿ ಕಟ್ಟಿಕೂಡುವ ಪ್ರಯತ್ನ ಮಾಡಲಾಗಿದೆ. ಈ ಪರಿಸರದಲ್ಲಿ ಲಭ್ಯವಿರುವ ಪುರಾತತ್ವ ಆಕರಗಳನ್ನು ಸಂಗ್ರಹಿಸಿ ಅವುಗಳನ್ನು ವಿಶ್ಲೇಷಿಸುವುದು ಪ್ರಮುಖ ಉದ್ದೇಶವಾಗಿದೆ. ಈ ಹಿನ್ನಲೆಯಲ್ಲಿ **"ತಂಬ್ರಹಳ್ಳಿಯ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯಡಿಯಲ್ಲಿ ಇಲ್ಲಿನ ಸ್ಥಳೀಯ ಚರಿತ್ರೆ

ಕಟ್ಟಿಕೊಡುವುದು. ಮತ್ತೊಂದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ ಪ್ರಾಗಿತಿಹಾಸಿಕ ಕಾಲದಿಂದಲೂ ತಂಬ್ರಹಳ್ಳಿಯ ಪ್ರದೇಶದ ಸುತ್ತಮುತ್ತಲಿನ ಸ್ಥಳಗಳಲ್ಲಿ ಶಿಲಾಯುಗದ ಜನವಸತಿ ನೆಲೆಗಳು ಕಂಡುಬಂದಿವೆ. ಇದಕ್ಕೆ ಪುರಾವೆಯಾಗಿ ಕೆಲವು ಪ್ರಾಕ್ತನಾಶೇಷಗಳು ದೊರೆಕಿವೆ.

### ೧.೨ ಅಧ್ಯಯನದ ವ್ಯಾಪ್ತಿ

ಯಾವುದೇ ಅಧ್ಯಯನದ ಉದ್ದೇಶ ಸ್ಪಷ್ಟಗೊಳ್ಳಬೇಕಾದರೆ ಒಂದು ನಿರ್ದಿಷ್ಟ ವ್ಯಾಪ್ತಿ ಅಗತ್ಯವಾಗಿರುವುದು ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಬರುವ ತಂಬ್ರಹಳ್ಳಿ ಗ್ರಾಮವನ್ನು ವ್ಯಾಪ್ತಿಯಾಗಿ ಇಟ್ಟುಕೊಳ್ಳಲಾಗಿದೆ. ಅಲ್ಲದೇ ಪ್ರಾಗಿತಿಹಾಸ ಕಾಲದಿಂದ ಆರಂಭ ವಿಜಯನಗರರೋತ್ತರ ಕಾಲದವರೆಗೆ ಕಾಲ ಮಾನವನ್ನು ದೃಷ್ಟಿಯಿಂದ ನಿಗಧಿಪಡಿಸಿಕೊಂಡಿರುತ್ತೇನೆ.

### ೧.೩ ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನ ವಿಧಾನ ಮುಖ್ಯವಾಗಿ ಕ್ಷೇತ್ರಕಾರ್ಯಧಾರಿತವಾಗಿದೆ. ಅಧ್ಯಯನದ ವ್ಯಾಪ್ತಿಗೊಳಪಡುವ ಪ್ರದೇಶಗಳಿಗೆ ನೇರವಾಗಿ ಭೇಟಿನೀಡಿ ದೊರೆಯುವ ಆಕರಗಳನ್ನು ಸಂಗ್ರಹಿಸಿಕೊಂಡು ಪರಿಶೀಲಿಸಿ ದಾಖಲಿಸಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ ಹಾಗೂ ಮೌಖಿಕ ಕಥನಗಳು ಮತ್ತು ಐತಿಹ್ಯಗಳ ಪರಿಚಯವಿರುವ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ವಿಷಯ ಸಂಗ್ರಹಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ದೊರೆಯುವ ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ವ್ಯವಸ್ಥಿತವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಸ್ತುತದಲ್ಲಿರುವ ಇತಿಹಾಸಕ್ಕೆ ಸಂಬಂಧಿಸಿದ ಅಧ್ಯಯನಗಳ ಸುಧಾರಿತ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಕರಗಳನ್ನು ಸಂಗ್ರಹಿಸಿ ವಿಷಯಾನುಸಾರ ಮತ್ತು ಕಾಲಾನುಸಾರ ವಿಶ್ಲೇಷಿಸಿ ಸಂಯೋಜಿಸುವ ಮೂಲಕ ಕಂಡುಕೊಂಡ ಫಲಿತಾಂಶಗಳಿಂದ ವೈಜ್ಞಾನಿಕ ಮತ್ತು ವೈಚಾರಿಕ ವಿಧಾನಗಳಿಂದ ಈ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ಕುಟ್ಟುವ ಪ್ರಯತ್ನ ಮಾಡಲಾಗಿದೆ.

### ೧.೪ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವನ್ನು ಅಧ್ಯಯನದ ಅನುಕೂಲದ ದೃಷ್ಟಿಯಿಂದ ಐದು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ಜೊತೆಗೆ ಪ್ರತಿ ಅಧ್ಯಾಯದಲ್ಲಿ ಅಗತ್ಯಕ್ಕೆ ಅನುಗುಣವಾಗಿ ಉಪವಿಭಾಗಗಳನ್ನು ಮಾಡಿಕೊಂಡು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ವಿಧಾನ, ಅಧ್ಯಯನದ ಸ್ವರೂಪ, ಅಧ್ಯಯನದ ಈವರೆಗಿನ ಸಮೀಕ್ಷೆಗಳನ್ನು ಒಳಗೊಂಡಿದೆ. ಇಲ್ಲಿ ಒಟ್ಟಾರೆ ಅಧ್ಯಯನದ ರೂಪುರೇಷೆಯನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ತಂಬ್ರಹಳ್ಳಿಯ ಪರಿಸರದ ಭೌಗೋಳಿಕ ಲಕ್ಷಣಗಳು, ಇಲ್ಲಿಯ ಪ್ರಾಗಿತಿಹಾಸ ಹಾಗೂ ಈ ಪ್ರದೇಶದಲ್ಲಿ ಕಂಡುಬರುವ ಕುರುಹುಗಳು ದಾಖಲೆಗಳ ಆಧಾರಗಳಿಂದ ಇಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ರಾಜಕೀಯ ಇತಿಹಾಸವನ್ನು ಕಟ್ಟಿಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ತಂಬ್ರಹಳ್ಳಿ ಪರಿಸರದಲ್ಲಿನ ಸ್ಮಾರಕಗಳಾದ ದೇವಾಲಯಗಳು, ಮೂರ್ತಿಶಿಲ್ಪಗಳು, ಕೋಟೆಗಳು, ಮಂಟಪಗಳು, ಬಾವಿಗಳು, ಹಾಗೂ ಇತರೆ ಸ್ಮಾರಕ ಶಿಲ್ಪಗಳು ರಚನೆ ವಿನ್ಯಾಸ ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ. ವಾಸ್ತುರಚನೆ, ಮೂರ್ತಿಶಿಲ್ಪ ಹಾಗೂ ದೇವಾಲಯಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಸಂಪ್ರದಾಯಗಳ ಅನುಸಾರ ಪಾರಂಪರಿಕವಾಗಿ ನಡೆದುಕೊಂಡು ಬಂದಿರುವ ಪ್ರಸ್ತುತ ಪ್ರದೇಶ ನಂಬಿಕೆ ಮತ್ತು ಆಚರಣೆ ಹಾಗೂ ಜಾತ್ರೆಗಳು, ಐತಿಹ್ಯಗಳ ಕುರಿತು ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯವು ಸಮಾರೋಪವಾಗಿದ್ದು, ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳ ಜೊತೆಗೆ ಹಾಗೂ ಅಧ್ಯಯನಕ್ಕೆ ಬಳಸಿದ ಆಕರಗಳಿಗೆ ಪೂರಕವಾಗಿ ವಕ್ತೃಗಳ ವಿವರ, ನಕ್ಷೆಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಛಾಯಾಚಿತ್ರಗಳನ್ನು ಒದಗಿಸಲಾಗಿದೆ.

**೧.೫ ಅಧ್ಯಯನದ ಸಮೀಕ್ಷೆ**

ಪ್ರಸ್ತುತ ಅಧ್ಯಯನ ಪ್ರದೇಶದ ತಂಬ್ರಹಳ್ಳಿಯ ಕುರಿತಂತೆ ನಿರ್ಧಿಷ್ಟವಾದ ಅಧ್ಯಯನಗಳು ಈವರೆಗೆ ನೆಡೆದಿರುವುದು ಕಂಡುಬಂದಿಲ್ಲ. ಆದರೆ ಬಳ್ಳಾರಿ ಜಿಲ್ಲೆ ಹಾಗೂ ಹಗರಿಬೊಮ್ಮನಹಳ್ಳಿ ತಾಲ್ಲೂಕು ಪ್ರದೇಶಗಳನ್ನು ವ್ಯಾಪ್ತಿಯಾಗಿಟ್ಟುಕೊಂಡು ಅಧ್ಯಯನಗಳು ನಡೆದಿವೆ. ಕೃತಿಗಳು, ಬಿಡಿ ಲೇಖನಗಳು, ಪಿಎಚ್.ಡಿ. ಮಹಾಪ್ರಬಂಧಗಳು ಹಾಗೂ ಸ್ಮರಣ ಸಂಚಿಕೆಗಳ ರೂಪದಲ್ಲಿ ಹೊರಬಂದಿವೆ. ಅವುಗಳನ್ನು ಪರಿಶೀಲಿಸುವುದರಿಂದ ಮೂಲಕ ಅಧ್ಯಯನವನ್ನು ವಿಸ್ತರಿಸಿಕೊಳ್ಳಲಾಗಿದೆ.

ಕೆ.ಎಂ. ಸುರೇಶ (ಸಂ) ೧೯೯೯ರಲ್ಲಿ, **ಕರ್ನಾಟಕ ದೇವಾಲಯಗಳ ಕೋಶ ಬಳ್ಳಾರಿ ಜಿಲ್ಲೆ** ಎಂಬ ಕೃತಿಯಲ್ಲಿ ಈ ಪರಿಸರದಲ್ಲಿ ಕಂಡುಬರುವ ದೇವಾಲಯ, ಕೆಲವು ವೀರಗಲ್ಲು ಮತ್ತು ಶಾಸನಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಕೆ. ಬಿ. ಶಿವತಾರಕ ಅವರು (೨೦೧೧) ರಲ್ಲಿ **ಕರ್ನಾಟಕದ ಪುರಾತತ್ವ ನೆಲೆಗಳು** ಎಂಬ ಗ್ರಂಥವನ್ನು ಹೊರತಂದಿದ್ದು, ಅದರಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಕಂಡುಬರುವ ಕೆಲವು ಪ್ರಾಗೈತಿಹಾಸಿಕ ನೆಲೆಗಳನ್ನು ಉಲ್ಲೇಖಿಸಿದ್ದಾರೆ

ಕುಂಭ ಸದಾಶಿವಪ್ಪ ಅವರು **ಹರಪನಹಳ್ಳಿ ಪಾಳೇಯಗಾರರು** ಎಂಬ ಕೃತಿಯನ್ನ ಹೊರತಂದಿದ್ದು, ಅದರಲ್ಲಿ ತಂಬ್ರಹಳ್ಳಿ ಪರಿಸರದಲ್ಲಿ ಆಳ್ವಿಕೆ ಮಾಡಿದ ಪಾಳೇಗಾರರ ಬಗ್ಗೆ ವಿವರಿಸಲಾಗಿದೆ.

ವಿರೂಪಾಕ್ಷ ಪೊಜಾರಹಳ್ಳಿಯವರ ವಸಾಹತುಕಾಲೀನ **ಕಲೆ ಮತ್ತು ವಾಸ್ತುಶಿಲ್ಪ ಬಳ್ಳಾರಿ ಜಿಲ್ಲೆ** ಎಂಬ ವಿಷಯ ಕುರಿತು ಸ್ವತಂತ್ರ್ಯ ಹಾಗೂ ಅಧ್ಯಯನ ಈವರೆಗೂ ಪ್ರಕಟಿಗೂಂಡಿಲ್ಲವಾದರೂ ಈ ಪ್ರದೇಶಕ್ಕೆ ಸಂಬಂಧಿಸಿದ ಹಲವಾರು ಸಂಗತಿಗಳ ಕುರಿತು ಆಂಶಿಕ ವಿವರಗಳು ಪ್ರಕಟವಾಗಿದೆ. ಅಂಥ ಅಧ್ಯಯನಕ್ಕೆ ಕುರಿತು ಸ್ಥೂಲ ಪರಿಚಯ ನೀಡುವ ಪ್ರಯತ್ನ ಇದಾಗಿದೆ. ಅಲ್ಲದೇ ಅವರು ಕಟ್ಟಿಕೊಟ್ಟಿ ಆಲೋಚನೆಗಳನ್ನು ಅಧ್ಯಯನದಲ್ಲಿ ಮನಃ ಪೂರ್ವಕವಾಗಿ ಬಳಸಿಕೊಳ್ಳಲಾಗಿದೆ.

ಟಿ.ಆರ್. ಚಂದ್ರಶೇಖರ ಅವರು **ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು** ಎಂಬ ಕೃತಿಯಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯು ಮದರಾಸ ಪ್ರಾಂತ್ಯದ ಒಂದು ದೊಡ್ಡ ಜಿಲ್ಲೆಯಾಗಿತ್ತು. ಬಳ್ಳಾರಿ ಜಿಲ್ಲೆಯು ಆದೋನಿ, ಆಲೂರು ಮತ್ತು ರಾಯದುರ್ಗ ತಾಲ್ಲೂಕುಗಳನ್ನು ಹೊಂದಿತ್ತು. ಜಿಲ್ಲೆಯ ಆಡಳಿತ ಉಪವಿಭಾಗಗಳು, ತಾಲ್ಲೂಕುಗಳು, ಮಂಡಲಗಳು ಹಾಗೂ ಹೋಬಳಿಗಳ ವಿವರವನ್ನು ನೀಡಿದ್ದಾರೆ. ಆರ್. ಎಲ್. ಪೊಲೀಸ್ ಪಾಟೀಲ ಅವರು **ನೀರಾವರಿ ಮತ್ತು ರೈತರ ಅಭಿವೃದ್ಧಿ** ಎಂಬ ಕೃತಿಯಲ್ಲಿ ಬಳ್ಳಾರಿಯ ಜೀವನಾಡಿ ಎನಿಸಿದ ತುಂಗಭದ್ರ ನದಿಯ ನಿರ್ಮಾಣ ನೀರಿನ ಮಟ್ಟ ವಿಸ್ತೀರ್ಣದ ಕುರಿತು ವಿಸ್ತೃತವಾದ ವಿವರಗಳು ಇದರಲ್ಲಿ ಪ್ರಕಟವಾಗಿರುವುದನ್ನು ಗಮನಿಸಲಾಗಿದೆ. ಬಿ. ಶೇಷಾದ್ರಿ, ಟಿ.ಆರ್. ಚಂದ್ರ ಶೇಖರ್ ಅವರು ಸಂಪಾದಿತ **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ** ಎಂಬ ಕೃತಿಯಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ನೆಲೆಗಳು. ಅದರ ಸ್ವರೂಪ ಹಾಗೂ ಅಲ್ಲೀಪುರ ಜೈಲ್‌ನ ಕುರಿತ ವಿಸ್ತೃತವಾದ ವಿವರವನ್ನು ನೀಡಿದ್ದಾರೆ. ಬಳ್ಳಾರಿ ಲಂಡನ್ ಮಿಷನರಿಯಾಗಿ ಆಗಮಿಸಿದ ಜಾನ ಹ್ಯಾಂಡ್ಯ, ಮಿಲಿಯಂ ರೀವ್, ಜಾನ ರೀಡ, ವಾರ್ಡ್ಸಾ ಇತ್ಯಾದಿ ಮಿಷನರಿಗಳು, ಹೀಬ್ರು ಗ್ರೀಕ್ ಮೂಲ ಭಾಷೆಯಲ್ಲಿದೆ ಬೈಬಲನ್ನು ಕನ್ನಡ ಭಾಷಾಂತರ ಮಾಡಿ ಪವಿತ್ರ ಸತ್ಯ ವೇದವನ್ನು ಓದುವಂತ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ ಎಂಬ ವಿವರದ ಕುರಿತು ವಿಶ್ಲೇಷಿಸಿದ್ದಾರೆ.

ಇವರಲ್ಲಿ ತಂಬ್ರಹಳ್ಳಿಯ ಹಗರಿಬೊಮ್ಮೊನಹಳ್ಳಿಯ ಬಗ್ಗೆ ತಿಳಿಸಲಾಗಿದೆ. ಸಿ. ಮಹದೇವ, ಎ. ಸುಬ್ಬಣ್ಣ ರೈ, ಮಾಧವ ಪೆರಾಜೆ ಅವರ ಸಂಪಾದಿತ 'ಹೊಸಪೇಟೆ ತಾಲ್ಲೂಕು ದರ್ಶನ' ಎಂಬ ಕೃತಿಯಲ್ಲಿ

ಪ್ರಾಗಿತಿಹಾಸದಿಂದ ಹಿಡಿದು ಆಧುನಿಕ ಅವಧಿಯಲ್ಲಿ ಸ್ಥಾಪಿಸಲಟ್ಟ ಆಡಳಿತ, ಶಿಕ್ಷಣ, ಆರೋಗ್ಯ, ನ್ಯಾಯರಕ್ಷಣೆ, ಸಾರಿಗೆ ಮತ್ತು ಸಂಪರ್ಕ ಹಾಗೂ ತುಂಗಭದ್ರ ಡ್ಯಾಮ್ ನಿರ್ಮಾಣದ ಬಗ್ಗೆ ದಾಖಲಿಸಿದ್ದಾರೆ. ಕೆ. ರವೀಂದ್ರನಾಥ ಅವರ ಸಂಪಾದಿತ **ಬಳ್ಳಾರಿ ಜಿಲ್ಲಾ ದರ್ಶನ** ಎಂಬ ಕೃತಿಯಲ್ಲಿ ಆಧುನಿಕ ಜಾಗತೀಕರಣದ ಪ್ರಭಾವದಿಂದ ಆದ ಸಾಂಸ್ಕೃತಿಕ ಪಲ್ಲಟಗಳ ಕುರಿತು ವಿಸ್ತೃತವಾದ ವಿವರಗಳನ್ನು ನೀಡಿದ್ದಾರೆ. ಕೋ. ಚನ್ನಬಸಪ್ಪ ಅವರ **ಕರ್ನಾಟಕ ಏಕೀಕರಣ ಬಳ್ಳಾರಿ ಜಿಲ್ಲಾ ಹಿನ್ನಲೆ** ಯಲ್ಲಿ ಎಂಬ ಕೃತಿಯಲ್ಲಿ ಕರ್ನಾಟಕ ಏಕೀಕರಣದಲ್ಲಿ ಜಿಲ್ಲೆಯ ಪಾತ್ರ, ಬಳ್ಳಾರಿ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾದ ಬಗೆಗೆ ಹಾಗೂ ತುಂಗಭದ್ರ ಡ್ಯಾಮ್ ಆಂಧ್ರಕ್ಕೆ ಹೇಗೆ ವಿಲೀನವಾಯಿತು ಎಂಬುದರ ಕುರಿತು ಸಮಕಾಲೀನ ಸಾಕ್ಷ್ಯಾಧಾರಗಳಿಂದ ಸಮರ್ಥಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರ **ವಸಾಹತು ಕಾಲೀನ ಬಳ್ಳಾರಿ ಜಿಲ್ಲೆ** ಎಂಬ ಕೃತಿಯಲ್ಲಿ ಕ್ರಿ.ಶ. ೧೮೦೦ರಿಂದ ೧೯೫೩ರ ವರೆಗಿನ ಅವಧಿಯಲ್ಲಿ ಆಳ್ವಿಕೆ ಮಾಡಿದ ೧೧೫ ಕಲ್ಟೆರು ರಾಜಕೀಯ ಚಿತ್ರಣ ಅವರ ಪ್ರಭಾವ, ಆರ್ಥಿಕ, ಸಾಮಾಜಿಕ ವಸಾಹತು ಶಾಹಿ ಆಳ್ವಿಕೆಯ ವಿರುದ್ಧ ಪ್ರತಿರೋಧ ಹಾಗೂ ಆಧುನಿಕ ಬಳ್ಳಾರಿಯ ವಿವಿಧ ಆಯಾಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾದಂಥದ್ದು

ಗುರುಮೂರ್ತಿ ಪಂಡಕೂರು ಅವರು ಇತಿಹಾಸ ದರ್ಶನ ಸಂಪುಟ–೨೧ರಲ್ಲಿ **ಹಗರಿಬೊಮ್ಮನಹಳ್ಳಿಯಲ್ಲಿ ಮನೆತನದ ಹೆಸರುಗಳು** ಎಂಬ ಲೇಖನದಲ್ಲಿ ವಿಜಯನಗರ ಸಾಮ್ರಾಜ್ಯದ ಪತನದ ನಂತರ ಇಲ್ಲಿಂದ ವ್ಯಾಪಾರಿಗಳು, ಅಧಿಕಾರಿಗಳು, ಕುಶಲಕರ್ಮಿಗಳು ಇತ್ಯಾದಿ ಶ್ರಮಿಕ ವರ್ಗವು ಬರುಸಿಬಂಧು ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಿಂದ ತಮ್ಮ ಮೂಲ ವೃತ್ತಿಯನ್ನು ಬದಲಾಯಿಸಿ, ಹೇಗೆ ಬೇರೆ ಬೇರೆ ಪ್ರವೃತ್ತಿಗಳಲ್ಲಿ ಕಲಬೆರಕೆಯಾದರು ಹಾಗೂ ತಮಿಳೂನಾಡಿನ ತಿರುವಣ್ಣಾ ಮಲೈ, ತಿರುಚಿನಾಪಳ್ಳಿ ಪಾಂತ್ರ್ಯದ ಕೊಂಗುನಾಡಿನ ಶ್ರಮಿಕ ವರ್ಗವು ಇಲ್ಲಿಗೆ ಬಂದು ತುಂಗಭದ್ರ ಅಣಿಕಟ್ಟೆಯನ್ನು ಕಟ್ಟಿದ ಬಗೆಗೆ ನಿರೂಪಿಸಿದ್ದಾರೆ.

ಇತಿಹಾಸ ದರ್ಶನ ಸಂಪುಟ–೨೨ರಲ್ಲಿ ಕುಂ.ಬಾ. ಸದಾಶಿವಪ್ಪ ಅವರು **ಬಳ್ಳಾರಿ ಜಿಲ್ಲಾ ಮೈಸೂರು ರಾಜ್ಯದಲ್ಲಿ ವಿಲೀನಗೊಂಡ ಸಂದರ್ಭದ ಹಿನ್ನೆಲೆ** ಎಂಬ ಲೇಖನದಲ್ಲಿ ಪ್ರತ್ಯೇಕ ಆಂಧ್ರ ಪ್ರದೇಶಕ್ಕಾಗಿ ಹೋರಾಟ ಮಾಡಿ ಪ್ರಾಣ ತ್ಯಾಗ ಮಾಡಿದ ಪೋಟ್ಟ ಶ್ರೀರಾಮುಲು ಅವರ ಪ್ರಭಾವ ಹಾಗೂ ದಾಂಭೂ ವರದಿಯಿಂದ ಆಂಧ್ರ ಪ್ರದೇಶಕ್ಕೆ ಪ್ರತ್ಯೇಕ ಸ್ವಾತಂತ್ರ್ಯ ರಾಜ್ಯ ಲಭಿಸಿತು. ಆದರೆ ಬಳ್ಳಾರಿ ಪ್ರದೇಶ ಆಂಧ್ರಕ್ಕೋ? ಮೈಸೂರು ಸಂಸ್ಥಾನಕ್ಕೆ ಸೇರಬೇಕೋ? ಎಂಬುದ ಬಗ್ಗೆ ನಡೆದ ವಾದ–ವಿವಾದ ಕುರಿತು ಚರ್ಚಿಸಿದ್ದಾರೆ.

ಮೇಲ್ಕಂಡ ಇತಿಹಾಸ ಹಾಗೂ ಲೇಖನಗಳನ್ನು ಪರಿಶೀಲಿಸುವ ಮೂಲಕ ಅಧ್ಯಾಯನ ವಿಷಯ, ಪೂರಕವಾದ ಅಂಶಗಳನ್ನು ಪ್ರಸುತ್ತ ಅಧ್ಯಾಯನದಲ್ಲಿ ಅಳವಡಿಸಿಕೊಂಡು ಮತ್ತು ಸಂಪ್ರಬಂಧವನ್ನು ಕಟ್ಟಿಕೊಂಡುವ ಪ್ರಯತ್ನ ಮಾಡಿರುತ್ತೇನೆ

**ಅಡಿಟಿಪ್ಪಣಿ**

ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿ ಪರಿಸರಕ್ಕೆ ಸಂಬಂಧ ಪಟ್ಟಂತಹ (ಬಳ್ಳಾರಿ ಜಿಲ್ಲೆಯನ್ನು ಒಳಗೊಂಡಂತೆ) ಗ್ರಂಥ, ಕೃತಿ, ಲೇಕನಗಳನ್ನು ಮಾತ್ರ ಸಮೀಕ್ಷೆಯಲ್ಲಿ ನೀಡಿ, ಅನಾವಶ್ಯಕ ವರದಿ ಅವಶ್ಯಕತೆಯಿಲ್ಲ.

ಸಮೀಕ್ಷೆ ಮಹತ್ವ ಅದಿಮೀರಿ–ಏನು ಆಗಿದೆ, ಹೇಗೆ ನಿರೂಪಿಸಿದ್ದಾರೆ ಮತ್ತು ಏನು ಕೊರತೆ ಕಂಡುಬರುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿರುವ ಸಂಗತಿಗಳ ಬಳಕೆ ಇತ್ಯಾಧಿ ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ.

# ಅಧ್ಯಾಯ-೨ ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಹಿನ್ನಲೆ

೨.೧ ಭೌಗೋಳಿಕ ಪರಿಸರ

೨.೨ ಪ್ರಾಗಿತಿಹಾಸಿಕ ಕಾಲ

೨.೩ ಇತಿಹಾಸ ಕಾಲ

# ಅಧ್ಯಾಯ -೨

# ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಹಿನ್ನಲೆ

## ೨.೧ ಭೌಗೋಳಿಕ ಪರಿಸರ

ಮಾನವನ ಸಾಂಸ್ಕೃತಿಕ ಬೆಳವಣಿಗೆಗೆ ಭೌಗೋಳಿಕ ಪರಿಸರ ಪ್ರಮುಖವಾದುದು, ನಿಸರ್ಗ ನಿರ್ಮಿತವಾದ ಬೆಟ್ಟ-ಗುಡ್ಡ, ಗವಿ, ಖನಿಜ, ನದಿ-ಹಳ್ಳ, ಕಾಡು, ಫಲವತ್ತಾದ ಮಣ್ಣು ಮೊದಲಾದವು ಪ್ರಾಣಿ ಮತ್ತು ಮನುಷ್ಯ ಸಂಕಲಗಳ ಬೆಳೆವಣಿಗೆ ಕಾರಣವಾಗಿವೆ. ಪ್ರಾಗಿತಿಹಾಸ ಕಾಲದಿಂದಲೇ ಪ್ರಾಕೃತಿಕ ಸಂಪತ್ತನ್ನು ಸರಿಯಾದ ಕ್ರಮದಲ್ಲಿ ಬಳಸುತ್ತ ನಿರಂತರವಾಗಿ ಮುಂದುವರೆದ ಮಾನವನ ಪಾರಂಪರಿಕ ಬೆಳವಣಿಗೆಯನ್ನು ಅವನು ಬಳಸಿ ಬಿಟ್ಟು ಹೋದ ಅವಶೇಷಗಳಿಂದ ನಿಗದಿಪಡಿಸಬಹುದು

ಬಳ್ಳಾರಿ ಜಿಲ್ಲೆ ಎಂಟು ತಾಲ್ಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ ಸಿರುಗುಪ್ಪ, ಸಂಡೂರು, ಈ ಹಗರಿಬೊಮ್ಮನಹಳ್ಳಿಯಲ್ಲಿ ನಾಲ್ಕು ಹೊಬಳಿಗಳಿವೆ, ಅವುಗಳಲ್ಲಿ ತಂಬ್ರಹಳ್ಳಿಯು ಹಗರಿಬೊಮ್ಮನಹಳ್ಳಿ ವ್ಯಾಪ್ತಿಗೆ ಬರುತ್ತದೆ. ಹೊಸಪೇಟೆ, ಕೂಡ್ಲಿಗಿ, ಕೊಟ್ಟೂರು, ಹರಪನಹಳ್ಳಿ, ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ, ತಂಬ್ರಹಳ್ಳಿ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿನ ಬರುವ ಚರಿತ್ರೆವುಳ್ಳ ಒಂದು ಸಣ್ಣ ಗ್ರಾಮ, ಈ ಗ್ರಾಮದ ಪೂರ್ವಕ್ಕೆ ಬಾಚಿಕೊಂಡನಹಳ್ಳಿ ಪಶ್ಚಿಮಕ್ಕೆ ಕೃಷ್ಣಪುರ ಉತ್ತರಕ್ಕೆ ಚಿಲುಗೋಡು ಹಾಗೂ ದಕ್ಷಿಣಕ್ಕೆ ಸೀಗನಹಳ್ಳಿ ಗ್ರಾಮಗಳೊಂದಿಗೆ ತನ್ನ ಗಡಿಯನ್ನು ಹಂಚಿಕೊಂಡಿದೆ. ಈ ಗ್ರಾಮ ಉತ್ತರ ಅಕ್ಷಾಂಶ ೧೪. ೩೦°-೧೫,೫೦° ಮತ್ತು ಪೂರ್ವ ರೇಖಾಂಶ ೭೫. ೪೦°-೭೭.೧೧° ನಡುವೆ ಇದೆ. ತಂಬ್ರಹಳ್ಳಿ ಬೆಟ್ಟ-ಗುಡ್ಡ ಮತ್ತು ಬಯಲು ಸೀಮೆ ಪ್ರದೇಶವನ್ನು ಒಳಗೊಂಡಿದೆ. ಈ ಗ್ರಾಮದಿಂದ ಸು. ನಾಲ್ಕು ಕಿಲೋ ಮೀಟರ್ ದೂರದಲ್ಲಿ ಬಂಡೆರಂಗನಾಥ್ ಗುಡ್ಡವಿದೆ. ಇದರ ಸನಿಹದಲ್ಲೇ ಇನ್ನೊಂದು ಸಣ್ಣ ಗುಡ್ಡವಿದೆ. ಅದಕ್ಕೆ ಹಾಲುಗುಡ್ಡ ಎಂದು ಕರೆಯುವರು. ಈ ಗ್ರಾಮಕ್ಕೆ ಹೊಂದಿಕೊಂಡಂತಿರುವ ಕಿತ್ನೂರು ಗ್ರಾಮದ ಪಕ್ಕದಲ್ಲಿ ಎರಡು ಚಿಕ್ಕ ಗುಡ್ಡಗಳಿವೆ. ಅವುಗಳಿಗೆ ಸಣ್ಣಳ್ಳ ಗುಡ್ಡ ಎಂದು ಕರೆಯಲಾಗುತ್ತದೆ. ೨೦೧೧ರ ಜನಗಣತಿಯ ಪ್ರಕಾರ ಈ ಗ್ರಾಮದ ಒಟ್ಟು ಜನಸಂಖ್ಯೆ ೫೪೬೧ ರಷ್ಟಿದೆ. ಇದರಲ್ಲಿ ಪುರುಷರರು ೨೮೧೩ ಮತ್ತು ೨೬೪೮ ಮಹಿಳೆಯರು ವಾಸವಾಗಿದ್ದಾರೆ.

**ಹವಾಗುಣ**

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತಂಬ್ರಹಳ್ಳಿ ಪರಿಸರದಲ್ಲಿ ಹವಾಗುಣವು ಶುಷ್ಕವಾದರೂ ಆರೋಗ್ಯಕರವಾಗಿದ್ದು, ಸ್ವಲ್ಪ ಏರಿಳಿತಗಳಿಂದ ಕೂಡಿರುತ್ತದೆ. ಸಾಮಾನ್ಯವಾಗಿ ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಅತಿಹೆಚ್ಚು ಉಷ್ಣಾಂಶವನ್ನು ಹೊಂದಿರುತ್ತದೆ. ನವಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಹಿತಕರ ವಾತವರಣವಿರುತ್ತದೆ. ಜೂನ್ ತಿಂಗಳಿನಿಂದ ಅಕ್ಟೋಬರ್ ತಿಂಗಳವರೆಗೆ ಮುಂಗಾರು ಮಳೆಯು ಹೆಚ್ಚಾಗಿರುತ್ತದೆ. ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಹಿಂಗಾರು ಮಳೆ ಬೀಳುತ್ತದೆ. ೧೯೭೧ ರಿಂದ ೧೯೯೦ರ ವರೆಗೆ ಈ ಗ್ರಾಮದಲ್ಲಿ ಮಳೆಯ ಪ್ರಮಾಣ ೫೦೬.೦ ಮಿಲಿ ಮೀಟರ್‌ಗಳಷ್ಟು ಇರುತ್ತದೆ. ಪ್ರಸ್ತುತ ದಿನಮಾನಗಳಲ್ಲಿ ೪೮೮.೬ ಮಿಲಿ ಮೀಟರ್‌ಗಳಷ್ಟು ಮಳೆ ಬೀಳುವುದನ್ನು ಮಳೆ ಮಾಪನ ಕೇಂದ್ರದ ಅಂಕಿ ಅಂಶಗಳು ತಿಳಿಸುತ್ತದೆ. ಕಡಿಮೆ ಮಳೆ ಬೀಳುವ ಪರಿಣಾಮವಾಗಿ ಬಹಳಷ್ಟು ಜನರು ದುಡಿಮೆಗಾಗಿ ಮಲೆನಾಡು ಹಾಗೂ ಗೇಣಿ ಪ್ರದೇಶಗಳಿಗೆ ವಲಸೆ ಹೋಗುವುದು ಸಾಮಾನ್ಯವಾಗಿದೆ.

**ತುಂಗಭದ್ರ ನದಿ**

ಇದು ಚಿಕ್ಕಮಂಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟದ ಸಾಲಿನ ವರಹ ಪರ್ವತದಲ್ಲಿ ಉಗಮವಾಗಿ ಪೂರ್ವಾಭಿಮುಖವಾಗಿ ಹರಿದು ಬಂಗಾಳಕೊಲ್ಲಿಗೆ ಸೇರುತ್ತದೆ. ತುಂಗಭದ್ರ ನದಿಯು ಹಗರಿಬೊಮ್ಮನಹಳ್ಳಿ ತಾಲೂಕಿನ ಮುಖ್ಯ ನದಿಯಾಗಿ ಹರಿಯುತ್ತದೆ. ಈ ನದಿಯು ಹಂಪಾಸಾಗರ ಮತ್ತು ತಂಬ್ರಳ್ಳಿ ಗ್ರಾಮದಿಂದ ೪೦ ಕಿ.ಮೀ ದೂರ ಹರಿಯುತ್ತದೆ.

**ಖನಿಜ ಸಂಪತ್ತು**

ಈ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಖನಿಜಗಳಲ್ಲೆಲ್ಲಾ ಅತಿ ಮುಖ್ಯವಾದುದೆಂದರೆ ಬೆಣಚುಕಲ್ಲು. ಪ್ರಾಚೀನ ಕಾಲದಿಂದ ಇದರ ಉಪಯೋಗದಿಂದ ಮಾನವನು ನಗರಿಕೃತ ಸಂಸ್ಕೃತಿಯೆಡೆಗೆ ಹೆಜ್ಜೆ ಹಾಕಿದನು.[೫] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆರ್ಥಿಕ ಮೂಲದ ಯಾವುದೇ ಖನಿಜ ಸಂಪತ್ತು ಇಲ್ಲ. ಆದರೆ ತಾಲ್ಲೂಕಿನ (ಇಂತಹ ಗ್ರಾಮಗಳಲ್ಲಿ ಕಂಡುಬರುತ್ತವೆ). ತಂಬ್ರಳ್ಳಿ ಗ್ರಾಮದಲ್ಲಿ ಕೆಲವು ಬೆಣಚು ಕಲ್ಲು ಗಣಿಗಾರಿಕೆಯನ್ನು ಕಾಣಬಹುದು. ಇದರಿಂದಾಗಿ ಕೆಲವು ಕುಟುಂಬಗಳು ಆ ವೃತ್ತಿಯಿಂದಾಗಿಯೇ ತಮ್ಮ ಜೀವನವನ್ನು ನಿರ್ವಹಿಸಿದ್ದಾರೆ.

ಮಣ್ಣು

ಈ ಗ್ರಾಮದ ಪರಿಸರದಲ್ಲಿ ಮುಖ್ಯವಾಗಿ ಮಿಶ್ರಿತ ಕೆಂಪು ಮಣ್ಣು ಮತ್ತು ಫಲವತ್ತಾದ ಜೇಡಿಮಣ್ಣು ಅಧಿಕವಾಗಿದೆ. ಮರಳು ಮಿಶ್ರಿತ ಕೆಂಪುಮಣ್ಣು ಸಾಮಾನ್ಯವಾಗಿ ತುಂಗಭದ್ರ ನದಿಪ್ರದೇಶಗಳಲ್ಲಿ ಕಂಡುಬರುತ್ತದೆ. ಈ ಮಣ್ಣುಗಳಲ್ಲಿ ಕೆಲವು ಕಡೆ ನೀರಾವರಿ ಮೂಲಕ ಕೃಷಿ ಚಟುವಟಿಕೆಗಳು ನಡೆಯುತ್ತವೆ.

ತುಂಗಭದ್ರ ನದಿ ಮತ್ತು ಅದರ ಉಪನದಿಗಳ ನೀರನ್ನು ಬಳಸಿಕೊಂಡು ಮತ್ತು ಮಳೆಯಾಶ್ರಿತ ನೀರಿನಿಂದ ಭತ್ತ, ಗೋಧಿ, ಜೋಳ, ಗೋವಿನ ಜೋಳ, ರಾಗಿ, ತೊಗರಿ, ಕಡಲೆ ಮೊದಲಾದ ಧಾನ್ಯಗಳು ಹಾಗೂ ಕಬ್ಬು, ಹತ್ತಿ, ಬಾಳೆ, ರೇಷ್ಮೆ ಇತ್ಯಾದಿ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಪ್ರದೇಶದ ಕಾಡು ಹಾಗೂ ಬೆಟ್ಟ-ಗುಡ್ಡಗಳಲ್ಲಿ ಕರಡಿ, ಕಾಡು ಹಂದಿ, ನರಿ, ತೋಳ ಮೊದಲಾದ ಪ್ರಾಣಿಗಳು ಹಾಗೂ ಹಲವು ಬಗೆಯ ಪಕ್ಷಿಗಳು ಕಂಡುಬರುತ್ತವೆ. ಅಲ್ಲದೆ ತುಂಗಭದ್ರ ನದಿ ನೀರಿನಲ್ಲಿ ಮೊಸಳೆಗಳಿವೆ.

**ತಂಬ್ರಹಳ್ಳಿ ಗ್ರಾಮದ ಸ್ಥಳನಾಮ**

ವಸ್ತು, ವ್ಯಕ್ತಿ, ಪ್ರಾಣಿ-ಪಕ್ಷಿಗಳ ಹೆಸರನ್ನು ಸೂಚಿಸುವ ಪದಕ್ಕೆ ನಾಮಪದ ಎನ್ನುತ್ತೇವೆ. ಇದರಲ್ಲಿ ರೂಢನಾಮ, ಅಂಕಿತನಾಮ ಎಂಬ ಅನೇಕ ಪ್ರಭೇದಗಳಿವೆ. ಅಂಕಿತನಾಮ ವ್ಯಕ್ತಿ, ಪ್ರಾಣಿ-ಪಕ್ಷಿಗಳ, ಸ್ಥಳಗಳ ಬಹುಸಂಖ್ಯೆಯಲ್ಲಿದ್ದಾಗ ಅಥವಾ ಅತೀ ಬಳಕೆಯಲ್ಲಿದ್ದಾಗ ಅಂತಹ ಅಂಕಿತನಾಮಗಳ ಸಾಮಾನ್ಯವಾದ ಮಟ್ಟಕ್ಕಿಳಿಯುತ್ತವೆ. ಸ್ಥಳನಾಮಗಳು ಸಾಮಾನ್ಯವಾಗಿ ಅಂಕಿತನಾಮಗಳಾಗಿರುತ್ತವೆ.

೧. ತಮ್ಮಡೆ+ಹಳ್ಳಿ=ವೀರಶ್ವವರ ಪೂಜಾರಿ, ತಮ್ಮಡಿ ಎಂಬುದೊಂದು ವೀರಶ್ವವ ಧರ್ಮದೊಳಗಿರುವ ಒಂದು ಸಮುದಾಯವರು ನೆಲೆ.
೨. ತಮ್ಮರ+ ಒಂದು ಸಸ್ಯ ಸೂಚಕ.
೩. ತಮ್ಮತ ಎಂಬ ಗಿಡಗಳ ಬಳ್ಳಿಗಳು ಹೆಚ್ಚಾಗಿ ಬೆಳೆಯುತ್ತಿದ್ದು ಪ್ರದೇಶ.
೪. ತಾಮ್ರ+ತಂಮರ= ತಂಬ್ರಗಿರಬೇಕು.
೫. ತಾಮ್ರದ ಲೋಹವನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದ ಅಥವಾ ತಾಮ್ರದ ವಸ್ತುಗಳನ್ನು ತಯಾರಿಸುತ್ತಿದ್ದ ಜನ ವರ್ಗದವರ ನೆಲೆ.
೬. ತಂವಾರಹಳ್ಳಿ= ಶಾಸನೋತ್ತ ಉಪಾತ
೭. ತಂ-ತಣ್ಣನೆಯ "ತಂಪಾದ" ಎಂದರ್ಥ.
೮. ತಂಮರಹಳ್ಳಿ+ತಂಬ್ರಳ್ಳಿ=ಸಮದ್ವಿತ್ವ ಧಾರಣ

೯. ಇಲ್ಲಿ ಸಮಾನ ಸ್ಥಾನಿಯ ಅನುನಾಸಿಕ.

(ಮ+ಬ) ಧ್ವನಿ ಬದಲಾವಣೆಯ ಕ್ರೀಯೆ ನಡೆದಿದೆ.

ತಂನರ+ತಂಬರ=ತೇವವನ್ನುಂಟು ಮಾಡುವ ಪ್ರದೇಶ ಇದು ಜಲವಾಹಕ ಸ್ಥಳನಾಮವಾಗಿದೆ. ತಂ+ಅಂಬರ+ತಂಬರ=ತಂಪಾದ ಪ್ರದೇಶವನ್ನುಳ್ಳ ಸ್ಥಳಕ್ಕೆ ತಂಬರ ಎಂದು ಕರೆಯುತ್ತಾರೆ.

ತಂಮರ–ತಂಬಾರ ಎಂದರೆ "ತೇವವನ್ನುಂಟು ಮಾಡುವ ಪ್ರದೇಶ ಅಥವಾ ಜಲಾವೃತ ಪ್ರದೇಶ ಎಂದು ತಂಬ್ರಹಳ್ಳಿಗೆ ಈ ಹೆಸರು ಬಂದಿರಬಹುದು. ಏಕೆಂದರೆ ತಂಬ್ರಹಳ್ಳಿ ಸುತ್ತಲ್ಲೂ ತುಂಗಭದ್ರ ನದಿಯು ಆವರಿಸಿದ್ದು ತಗ್ಗು ಪ್ರದೇಶದಲ್ಲಿ ತಂಬ್ರಹಳ್ಳಿ ಇದೆ. ಹಿರೇಹಳ್ಳಿ ಎಂಬ ದೊಡ್ಡದೊಂದು ಹಳ್ಳವು ಇಲ್ಲಿ ಹರಿಯುತ್ತಿತ್ತು. ಅಂತೆಯೇ ಸಂಪೂರ್ಣ ಜಲಾವೃತ್ತ ಪ್ರದೇಶವಾಗಿದ್ದರಿಂದ ಈ ಊರಿಗೆ ತಂಬ್ರಹಳ್ಳಿ ಎಂಬ ಹೆಸರು ಬಂದಿದೆ. ೨

## ೨.೨ ಪ್ರಾಗಿತಿಹಾಸ ಕಾಲ

ಮಾನವನ ಇತಿಹಾಸವನ್ನು ಅಧ್ಯಯನದ ದೃಷ್ಟಿಯಿಂದ ಪ್ರಾಗಿತಿಹಾಸ ಕಾಲ ಮತ್ತು ಇತಿಹಾಸ ಕಾಲ ಎಂದು ಗುರುತಿಸಲಾಗುತ್ತದೆ. ಲಿಖಿತ ಆಧಾರಗಳು ದೊರೆತಿರುವ ಕಾಲಮಾನವನ್ನು ಇತಿಹಾಸ ಕಾಲ ಎಂದರೆ, ಲಿಖಿತ ದಾಖಲೆಗಳಿಗಿಂತ ಮುಂಚಿನ ಕಾಲಘಟ್ಟವನ್ನು ಪ್ರಾಗಿತಿಹಾಸ ಕಾಲ ಎಂದು ವಿಂಗಡಿಸಲಾಗಿದೆ. ಪ್ರಾಗಿತಿಹಾಸ ಕಾಲದಲ್ಲಿ ಮಾನವನಿಗೆ ಬರವಣಿಗೆ ತಿಳಿದಿರಲಿಲ್ಲ ಇನ್ನೂ ಆದಿ ಹಂತದಲ್ಲಿ ಆಗಿತ್ತು. ಪ್ರಾಚ್ಯವಸ್ತು ಅವಶೇಷಗಳು ಪ್ರಮುಖ ಆಕರಗಳಾಗಿರುತ್ತವೆ. ಕ್ರಿ. ಪೂ. ಮೂರನೆಯ ಶತಮಾನದ ಅಶೋಕನ ಶಾಸನಗಳಿಂದ ಲಿಖಿತ ದಾಖಲೆಗಳು ದೊರೆಯುತ್ತವೆ.

ಪ್ರತಿಯೊಂದು ಪ್ರದೇಶದ ಬೆಳವಣಿಗೆಯು ಅಲ್ಲಿನ ಪರಿಸರವನ್ನು ಅವಲಂಭಿಸಿರುತ್ತದೆ. ಯಾವುದೇ ಪ್ರದೇಶದಲ್ಲಿ ಜೀವಿಗಳು ನೆಲೆಸಲು ಅಲ್ಲಿನ ಭೌಗೋಳಿಕ ಲಕ್ಷಣಗಳು ಮುಖ್ಯವಾಗುತ್ತವೆ. ಬಳ್ಳಾರಿ ಜಿಲ್ಲೆಯು ಭೌಗೋಳಿಕವಾಗಿ ಬೆಟ್ಟ, ಗುಡ್ಡ, ಅರಣ್ಯ, ಬಯಲು ಪ್ರದೇಶಗಳಿಂದ ಕೂಡಿದ್ದು, ಹಳ್ಳ–ಕೊಳ್ಳಗಳ ನದಿಗಳು, ಕೆರೆ–ಕಟ್ಟೆಗಳು ಹೆಚ್ಚು ಕಂಡುಬರುತ್ತದೆ. ಇನ್ನೂ ಈ ಜಿಲ್ಲೆಯ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲ್ಲೂಕುಗಳಲ್ಲಿ ಕಬ್ಬಿಣ, ತ್ರಾಮ, ಸುಣ್ಣದ ಕಲ್ಲು ಮೊದಲಾದ ಖನಿಜ ಸಂಪತ್ತು ದೊರೆತಿದೆ. ಹೀಗೆ ನೈಸರ್ಗಿವಾಗಿ ಶ್ರೀಮಂತವಾಗಿದ್ದ ಈ ಜಿಲ್ಲೆ ಮಾನವ ನೆಲೆಸಲು ಆರೋಗ್ಯಕರ ವಾತಾವರಣವನ್ನು ಹೊಂದಿದೆ. ಈ ಪ್ರದೇಶಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ನೆಲೆಸಿರುವುದಕ್ಕೆ ಈ ಜಿಲ್ಲೆಯ ಹಲವಾರು ಕಡೆಯಲ್ಲಿ ಶಿಲಾಯುಗ ಸಂಸ್ಕೃತಿಯ ಕುರುಹುಗಳು ದೊರೆತಿವೆ. ಅಂತೆಯೇ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಕೆಲವು ಗ್ರಾಮಗಳು ಪ್ರಾಗತಿಹಾಸದ ಕುರುಹುಗಳನ್ನು ಹೊಂದಿವೆ.

ಫಲವತ್ತಾದ ಭೂಮಿ, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ನಿಸರ್ಗ ನಿರ್ಮಿತ ಮತ್ತು ಕೊರೆದು ತಯಾರಿಸಿದ ಗವಿಗಳು, ತಾಮ್ರ, ಕಬ್ಬಿಣ, ಚಿನ್ನದ ಅದಿರು, ತುಂಗಭದ್ರ ಮತ್ತು ಅದರ ಉಪನದಿಗಳ ನೀರಿನ ಸರಬರಾಜು, ಕಾಡು ಮೊದಲಾದ ಭೌಗೋಳಿಕ ಅನುಕೂಲತೆಗಳಿಂದ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಾಸಸ್ಥಾನವಾಗುವುದಕ್ಕೆ ಕಾರಣವಾಯಿತು[೪]

**ಹಳೆಯ ಶಿಲಾಯುಗ**

ಹಳೆಯ ಶಿಲಾಯುಗ ಸಂಸ್ಕೃತಿ ಮಾನವನ ಜೀವನದ ಮೊದಲ ಹಂತವಾಗಿದ್ದು, ಪ್ರಾಣಿಗಳನ್ನು ಬೇಟೆಯಾಡಿ ಮತ್ತು ಗೆಡ್ಡೆ-ಗೆಣಸುಗಳನ್ನು ತಿಂದುಕೊಂಡು ಪ್ರಾಣಿಯಂತೆ ಅಲೆಮಾರಿ ಜೀವನ ಸಾಗಿಸುತ್ತಿದ್ದ. ಪ್ರಕೃತಿಯಲ್ಲಿ ದೊರೆಯುತ್ತಿದ್ದ ಶಿಲೆಯಿಂದ ಆಯುಧ ತಯಾರಿಸಿಕೊಂಡು ಬೇಟೆ ಮತ್ತು ತನ್ನ ರಕ್ಷಣೆಗೆ ಬಳಸುತ್ತಿದ್ದ. ಹಾಗಾಗಿ ಶಿಲೆ ಮಾನವನ ಜೀವನದ ಪ್ರಮುಖ ಅಂಗವಾಗಿತ್ತು. ಶಿಲಾಯುಧಗಳ ಆಧಾರದ ಮೇಲೆ ಹಳೆಯ ಶಿಲಾಯುಗವನ್ನು ಮೂರು ಭಾಗ ಮಾಡಲಾಗಿದೆ.

೧. ಆದಿಹಳೆಯ ಶಿಲಾಯುಗ ಸಂಸ್ಕೃತಿ

೨. ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿ

೩. ಅಂತ್ಯ ಹಳೆಯ ಶಿಲಾಯುಗ ಸಂಸ್ಕೃತಿ

ಕರ್ನಾಟಕದ ಮಲಪ್ರಭಾ ನದಿ ತೀರ, ಕಿಬ್ಬನಹಳ್ಳಿ, ಭೀಮ ಮತ್ತು ಕೃಷ್ಣ ನದಿ ತೀರ ಉಣಸಗಿ ಮುಂತಾದ ಪ್ರದೇಶಗಳಲ್ಲಿ ಹಳೇ ಶಿಲಾಯುಗಕ್ಕೆ ಸೇರಿದೆ. ಕೈಗೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ದುಂಡಾದ ಉಪಕರಣ ಮೊದಲಾದ ಶಿಲಾಯುಗದ ಪರಿಕರಗಳು ದೊರತಿವೆ. ಈ ಉಪಕರಣಗಳೂ ಫ್ರಾನ್ಸ್ ದೇಶದ ಸ್ಪಂಟ್ ಆಶ್ಯೂಲ್ ಮಾದರಿಯನ್ನು ಹೋಲುತ್ತವೆ[೫]

ಬಾದನಹಟ್ಟಿ ಗುಡ್ಡ, ಬಳ್ಳಾರಿ, (ಬಳ್ಳಾರಿ ತಾಲ್ಲೂಕು), ಕಮಲಾಪುರ, ಗಾದಿನೂರು (ಹೊಸಪೇಟೆ ತಾಲ್ಲೂಕು), ನಿಟ್ಟೂರು (ಸಿರುಗುಪ್ಪ ತಾಲ್ಲೂಕು), ಮಲ್ಲಾಪುರ (ಸಂಡೂರು ತಾಲ್ಲೂಕು), ಕುರುವತ್ತಿ (ಹಡಗಲಿ ತಾಲ್ಲೂಕು) ಈ ಸಂಸ್ಕೃತಿ ಪ್ರಮುಖ ನೆಲೆಗಳಾಗಿ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಹಳೆಶಿಲಾಯುಗ ಸಂಸ್ಕೃತಿಯ ಕಾಲಕ್ಕೆ ಸೇರಿದ ಯಾವುದೇ ರೀತಿಯ ಕುರುಹುಗಳು ದೊರೆತಿಲ್ಲ. ಪ್ರಸ್ತುತ ಅಧ್ಯಯನ ಪ್ರದೇಶದಯೂ ಈ ಸಂಸ್ಕೃತಿಯ ನೆಲೆಗಳು ಕಂಡುಬರುವುದಿಲ್ಲ.

ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿ ಕರ್ನಾಟಕದಲ್ಲಿ ಇತ್ತು ಎಂಬುದನ್ನು ೧೯೫೭ರಲ್ಲಿ ಆರ್. ಡಿ. ಬ್ಯಾನರ್ಜಿ ಅವರು ಗುರುತಿಸಿದ್ದಾರೆ. ಕೃಷ್ಣ ನದಿಯ ಕೆಲವು ಭಾಗ ಸುರುಪುರ ಪ್ರದೇಶದಲ್ಲಿ ಮೊದಲ

ಬಾರಿಗೆ ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಯನ್ನು ಗುರಿತಿಸಲಾಯಿತು[೬] ಬದಲಾವಣೆಯ ಹಂತಕ್ಕೆ ಚಲಿಸಿದ ಮಾನವ ಜೀವನದ ವಿಕಾಸದ ಗುರುತುಗಳನ್ನು ಈ ಸಂಸ್ಕೃತಿಯ ಆಯುಧಗಳಲ್ಲಿ ಕಾಣಬಹುದು. ವಿಶಿಷ್ಟವಾದ ನೀಳಚೆಕ್ಕೆ ಹಾಗೂ ಮೊನೆ ಮೊದಲಾದ ಶಿಲಾಯುಧಗಳನ್ನು ಈ ಸಂಸ್ಕೃತಿಯ ಮಾನವ ತಯಾರಿಸಿಕೊಂಡಿದ್ದನು. ಚಿಕ್ಕ ಕಲ್ಲುಗಳಿಂದ ತೀವಾಲ್ವಾ, ಕ್ಲಾಕ್ಟನ, ತಂತ್ರ ಬಳಸಿ ಶಿಲಾಯುಧಗಳನ್ನು ತನಗೆ ಬೇಕಾದ ಆಕಾರದಲ್ಲಿ ತಯಾರಿಸಿಕೊಂಡಿದ್ದಾನೆ.

ಅಂತ್ಯ ಹಳೆಯ ಶಿಲಾಯುಗ ಸಂಸ್ಕೃತಿಯ ನೆಲೆಗಳು ವಿರಳವಾಗಿ ಕಂಡುಬಂದಿವೆ. ಮೊಟ್ಟಮೊದಲಿಗೆ ಈ ಸಂಸ್ಕೃತಿಯ ನೆಲೆಯನ್ನು ೧೯೫೯ರಲ್ಲಿ ಸಾಲವಾಡಿಗಿ (ಉಪಕರಣ ಉತ್ಪಾದನಾ ನೆಲೆ) ಎಂಬಲ್ಲಿ ವಿದ್ವಾಂಸರಾದ ಅ ಸುಂದರ ಅವರು ಶೋಧಿಸಿದ್ದಾರೆ[೭] ಈ ಸಂಸ್ಕೃತಿಯ ಮಾನವ ಶಿಲಾಯುಧಗಳನ್ನು ಮತ್ತಷ್ಟು ಹೊಸ ರೂಪದ ಕರಕುಶಲತೆಯಿಂದ ತನಗೆ ಬೇಕಾದ ಆಕಾರದಲ್ಲಿ ತಯಾರು ಮಾಡಿಕೊಂಡು ಬಳಸುವ ನೈಪುಣ್ಯತೆಯನ್ನು ಕಂಡುಕೊಂಡಿದ್ದನು.

**ಸೂಕ್ಷ್ಮ ಶಿಲಾಯುಗ**

ಈ ಸಂಸ್ಕೃತಿಯ ಹಂತದಲ್ಲಿ ಮಾನವ ತನ್ನ ಅಲೆಮಾರಿ ಜೀವನಕ್ಕೆ ಅಂತ್ಯ ಹಾಡಿ ಒಂದಡೆ ನೆಲೆನಿಂತು, ಬೇಟೆ ಮಿನುಗಾರಿಕೆ ಹಾಗೂ ಆಹಾರ ಸಂಗ್ರಹಣೆಯ ಜೊತೆಗೆ ಆಹಾರ ಉತ್ಪಾದನೆ ಆರಂಭಿಸಿಕೊಂಡು ಜೀವನದ ಸ್ಥಿತ್ಯಂತರದ ಕಡೆಗೆ ಮುಖಮಾಡಿದನು. ಶಿಲೋಪಕರಣಗಳನ್ನು ಕಿರುಗಾತ್ರದಲ್ಲಿ ತಯಾರಿಸುವ ವಿಶಿಷ್ಟ ಲಕ್ಷಣದ ಜೊತೆಗೆ ವೈವಿಧ್ಯ ಕ್ರಮಗಳನ್ನು ಕಂಡುಕೊಂಡನು. ನೀಳ ಚೆಕ್ಕೆ ಮಾದರಿ, ಹೆರೆ ಚೆಕ್ಕೆ ಮಾದರಿ, ಮೊನೆ ಮಾದರಿ. ಬಾಣದ ಮೊನೆ, ಕೋರೆಯುಳ್ಳ ಅರ್ಧಚಂದ್ರಾಕೃತಿ, ದಬ್ಬಳ ಮೊದಲಾದ ಉಪಕರಣ ಕರ್ನಾಟಕದ ಹಲವು ನೆಲೆಗಳಲ್ಲಿ ದೊರತಿವೆ. ೧೯೪೭ರಲ್ಲಿ ಮಾರ್ಟಿಮರ್ ವ್ಹೀಲ್‌ರವರು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯಲ್ಲಿ ಉತ್ಖನನ ಮಾಡಿ ಈ ಹಂತದ ಉಪಕರಣಗಳನ್ನು ಗುರುತಿಸಿದ್ದಾರೆ[೮]

ಬಳ್ಳಾರಿ ಜಿಲ್ಲೆಯ ಕುಡುತಿನಿ, ಸಂಗನಕಲ್ಲು (ಬಳ್ಳಾರಿ ತಾಲ್ಲೂಕು), ಕಾರಿಗನೂರು, ಗಾದಿನೂರು, ತಿಮ್ಮಲಾಪುರ, ಡಣಾಪುರ, ಭುವನಹಳ್ಳಿ, ಹಂಪಿ (ಹೊಸಪೇಟೆ ತಾಲ್ಲೂಕು), ಅಪ್ಪಲಾಪುರ, ಅಯ್ಯನಹಳ್ಳಿ, ಕುರೆಕಪ್ಪು, ಕೋದಾಳು, ತೋರಣಗಲ್ಲು, ಮಲ್ಲಾಪುರ, ಮಾದಹಳ್ಳಿ, ಯಶವಂತಪುರ, ರಾಜಾಪುರ (ಸಂಡೂರು ತಾಲ್ಲೂಕು), ಮಾಡಲಗೇರಿ (ಹರಪನಹಳ್ಳು ತಾಲ್ಲೂಕು) ಈ ನೆಲೆಗಳಲ್ಲಿ ಸೂಕ್ಷ್ಮಶಿಲಾಯುಗದ ಸಂಸ್ಕೃತಿಯ ಕುರುಹುಗಳು ಕಂಡುಬಂದಿವೆ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಈ ಸಂಸ್ಕೃತಿಗೆ ಸೇರಿದ ಯಾವುದೇ ಕುರುಹುಗಳು ಕಂಡುಬಂದಿಲ್ಲ.

### ನವ ಶಿಲಾಯುಗ

ನವಶಿಲಾಯುಗ ಸಂಸ್ಕೃತಿ ಒಂದು ವಿಶೇಷವಾದದ್ದು. ಮನವನ ಜೀವನ ವಿಕಾಸ ಹೊಂದಿದ ಪ್ರಮುಖ ಹಂತವಾಗಿದೆ. ಭಾರತದ ಇತರೆ ಪ್ರದೇಶಗಳಿಗಿಂತ ಕರ್ನಾಟಕವು ನವಶಿಲಾಯುಗದ ಮಾನವನನ್ನು ವಿಶೇಷವಾಗಿ ಆಕರ್ಷಿಸಿರುವುದು ಕಂಡುಬರುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ನವ ಶಿಲಾಯುಗದ ಮಾನವನು ಆಯುಧಗಳನ್ನು ತಯಾರು ಮಾಡಲು ಬಳಸುತ್ತಿದ್ದು ಶಿಲೆಯು ಹೇರಳವಾಗಿ ಕರ್ನಾಟಕದಲ್ಲಿ ದೊರೆಯುತ್ತಿತ್ತು.[೯] ನವಶಿಲಾಯುಗದ ಮಾನವ ಅಲೆಮಾರಿ ಜೀವನ ತೂರೆದು ಸ್ಥಿತ್ಯಂತರದ ಕಡೆಮುಖ ಮಾಡಿರುವುದು, ಈ ಸಂಸ್ಕೃತಿಯನ್ನು ನೆಲೆನಿಂತ ಮತ್ತು ಪಶುಪಾಲನೆ ಸಂಸ್ಕೃತಿಯ ಮೊದಲ ಹಂತವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

### ಶಿಲಾ ತಾಮ್ರಯುಗ

ಶಿಲಾಯುಧಗಳ ಜೊತೆ ತಾಮ್ರ ಅಥವಾ ಕಂಚಿನ ಉಪಕರಣಗಳು ನಿರ್ಮಾಣವಾಗಿದ್ದರಿಂದ ಈ ಸಂಸ್ಕೃತಿಯನ್ನು ಶಿಲಾ ತಾಮ್ರಯುಗವೆಂದು ಕರೆಯಲಾಗುತ್ತದೆ. ಭಾರತದಾದ್ಯಂತ ಇಂಥ ಹಲವು ನೆಲೆಗಳು ಕಂಡುಬಂದಿವೆ. ಹರಪ್ಪ ಸಂಸ್ಕೃತಿಯಲ್ಲಿ ತಾಮ್ರದಿಂದ ತಯಾರಿಸಿದ ವಿವಿಧ ನಮೂನೆಯ ಆಯುಧ ಉಪಕರಣಗಳು ದೊರೆತಿವೆ.[೧೦] ಕರ್ನಾಟಕದಲ್ಲಿ ಕೆಲವು ಕಡೆ ಈ ಸಂಸ್ಕೃತಿಯ ಕುರುಹುಗಳು ದೂರೆತಿವೆ. ಅವೆಲ್ಲ ಕಂಚಿನ ಚಪ್ಪಟೆ ಕೊಡಲಿ, ತಂತಿ ನೀರಿನಗಾಳ ಮತ್ತು ತೆಳ್ಳನೆ ಬಾಯುಳ್ಳ ಅಲಗಿನ ಉಪಕರಣಗಳು ಕೃಷ್ಣ ನದಿ ಪ್ರದೇಶದ ಕೆಲವು ನೆಲೆಗಳಲ್ಲಿ ದೂರೆತಿವೆ. ದಕ್ಷಿಣ ಭಾರತದ ಅತ್ಯಂತ ಗಮನಾರ್ಹವಾದ ಉಪಕರಣವೆಂದರೆ ರಾಯಚೂರು ಹತ್ತಿರ ಕಲ್ಲುರು ಗ್ರಾಮದ ನೆಲೆಯಲ್ಲಿ ದೂರೆತ ಉದ್ದನೆಯ ಖಡ್ಗಗಳು ಪ್ರಮುಖವಾದವು. ಇದೇ ರೀತಿ ಸಣ್ಣ ಮಾದರಿ ಕಠಾರಿಯಂಥ ಉಪಕರಣಗಳು ಭೀಮಾನದಿ ಉಗಮ ಪ್ರದೇಶದ ಚಂದೂಳಿ ಗ್ರಾಮದಲ್ಲಿ ಮತ್ತು ಬ್ರಹ್ಮಗಿರಿಯಲ್ಲಿ ಒಂದು ಚಿಕ್ಕ ಚಾಕು ದೂರೆತಿವೆ.[೧೧] ಮಡಿಕೆಯ ಮಾದರಿಯ ಪಾತ್ರಗಳು ಕಂಡುಬರುತ್ತದೆ. ಇವುಗಳಲ್ಲಿ ವರ್ಣ ರೇಖಾ ಚಿತ್ರಮಯವಾದ ಪಾತ್ರೆಗಳು ಕಂಡುಬಂದಿವೆ. ಅವುಗಳ ಮೇಲೆ ಪ್ರಾಣಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ಇಂತಹ ಮಣ್ಣಿ ಪಾತ್ರೆಗಳನ್ನು ಜೊರ್ವೇ ಮತ್ತು ಸಾವಳದ ಮಡಿಕೆ ಮಾದರಿಗಳೆಂದು ಕರೆಯಲಾಗುತ್ತದೆ. ಶಿಲಾತಾಮ್ರಯುಗದ ಜನರು ಸೌಂದರ್ಯ ಪ್ರಜ್ಞೆಯುಳ್ಳದರಾಗಿದ್ದಾರೆಂದು ಅವರ ಮಣ್ಣಿನ ಗೊಂಬೆ ಹಾಗೂ ದೂರೆತ ವರ್ಣಚಿತ್ರಗಳಿಂದ ತಿಳಿಯಬಹುದಾಗಿದೆ.

ಈ ಸಂಸ್ಕೃತಿಯ ನೆಲೆಗಳು ಬಳ್ಳಾರಿ ಜಿಲ್ಲೆಯ ಕಕ್ಕೆ ಬೇವಿನಹಳ್ಳಿ, ಕುಡತಿನಿ, ಕಪಗಲ್ಲು, ಬೆಳಗಲ್ಲು, ಸಂಗನಕಲ್ಲು, ಹಲಕುಂದಿ, ಹಳೆನೆಲ್ಲುಡಿ (ಬಳ್ಳಾರಿ ತಾಲ್ಲೂಕು), ಇಂಗಳಗಿ, ಕಾಕುಬಾಳ, ಗಾದಿಗನೂರು,

ತಿಮ್ಮಲಾಪುರ, ಡಣಾಪುರ, ಬೆಳಗೋಡುಂರಾಳ, ವೆಂಕಟಾಪುರ (ಹೊಸಪೇಟೆ ತಾಲ್ಲೂಕು), ಕೊಂಚಗೇರಿ, ಕೋಟೆಕಲ್ಲುದುರ್ಗ, ತೆಕ್ಕಲಕೋಟೆ, ನಿಟ್ಟೂರು, ಸನವಾಸಪುರ, ಹಚ್ಚೋಳ್ಳಿ (ಸಿರುಗುಪ್ಪ ತಾಲ್ಲೂಕು), ಇಂಗಳ್ಗಿ, ಕುರೆಪ್ಪಗುಡ್ಡ, ತೋರಣಗಲ್ಲು, ದರೋಜಿ, ರಾಜಾಪುರ, ಲಿಂಗದಹಳ್ಳಿ (ಸಂಡೂರು ತಾಲ್ಲೂಕು), ಬೆಳಗಟ್ಟಿ, ರಾಮದುರ್ಗ(ಕೂಡ್ಲಿಗಿ ತಾಲ್ಲೂಕು), ಅಲ್ಲಿಪುರ, ಮಾಗಳ, ಮೈಲಾರ, ರಾಜವಾಳ (ಹೂವಿನಹಡಗಲಿ ತಾಲ್ಲೂಕು) ಮತ್ತು ಮಾಡಲಗೇರಿ (ಹರಪನಹಳ್ಳಿ ತಾಲ್ಲೂಕು), ಮುಂತಾದವು ಪ್ರಮುಖ ನೆಲೆಗಳಾಗಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಸಂಸ್ಕೃತಿಯ ನೆಲೆಗಳಾವು ಕಂಡುಬರುವುದಿಲ್ಲ. ಆದರೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಹಂಪಸಾಗರ ಮತ್ತು ಗೆದ್ದಿಕೇರೆ ಗ್ರಾಮಗಳಲ್ಲಿ ಕೊಡಲಿ, ಬೀಸುವ ಕಲ್ಲು, ಚಕ್ಕೆಕಲ್ಲು ಉಪಕರಣಗಳ ಜೊತೆಗೆ ಹೆರೆಚೆಕ್ಕೆ ಮಾದರಿಯ ಉಪಕರಣಗಳು ಈ ನೆಲೆಗಳಲ್ಲಿ ದೊರೆಯುತ್ತವೆ.

## ಬೃಹತ್ ಶಿಲಾಯುಗದ

ಈ ಸಂಸ್ಕೃತಿಯ ಜನರು ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ನಿರ್ಮಿಸಿಕೊಂಡಿರುವುದು ಕುತೂಹಲಕರ ಸಂಗತಿಯಾಗಿದೆ. ಹಾಗಾಗಿ ಇದನ್ನು ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ. ಈ ಹಂತದಲ್ಲಿ ಕಬ್ಬಿಣ ತಯಾರಿಕೆ ಮತ್ತು ಬಳಕೆ ಮಾಡಿರುವುದು. ಮಾನವನ ಜೀವನದ ವಿಶೇಷ ಬದಲಾವಣೆಯಾಗಿದೆ. ಕಲ್ಗೋರಿಗಳು ಅಂದಿನ ಜನರು ಪಾರಂಪರಿಕ ಸಂಪ್ರದಾಯ ನಂಬಿಕೆಗಳ ತಳಹದಿಯ ಮೇಲೆ ರಚನೆ ಆದವುಗಳಾಗಿವೆ. ಈ ಸಂಸ್ಕೃತಿಯ ಜನರು ಜೀವಿಸುತ್ತಿದ್ದ, ಪ್ರದೇಶಗಳನ್ನು ವಾಸ್ತವ್ಯದ ನೆಲೆಗಳೆಂದು ಹಾಗೂ ಶವ ಸಂಸ್ಕಾರದ ಪ್ರದೇಶಗಳನ್ನು ಗೋರಿ ನೆಲೆಗಳೆಂದು ಗುರುತಿಸಲಾಗಿದೆ. ಕಲಲ್ಗೊಗೋರಿಗಳು ನಿರ್ಮಾತೃಗಳ ಕಾಲಮಾನ, ನಿರ್ಮಾತೃಗಳ ವಸತಿ ಹಾಗೂ ಅವರ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ತಿಳಿಸುವ ಆಧಾರಗಳಾಗಿವೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಕಲ್ಗೋರಿಗಳು ಮತ್ತು ವಸತಿ ನೆಲೆಗಳು ಕಂಡುಬಂದಿದ್ದು. ಹಗರಿಬೊಮ್ಮನಹಳ್ಳಿ ತಾಲ್ಲೂಕು ಪರಿಸರದಲ್ಲಿ ಕೂಡ ಈ ಸಂಸ್ಕೃತಿಯ ಹಲವು ಕುರುಹುಗಳು ಲಭ್ಯವಾಗಿವೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನಿಂದ ಹಂಪಸಾಗರ ಮಾರ್ಗದಲ್ಲಿ ೨೫ ಕಿ.ಮೀ ದೂರ ಅರಣ್ಯ ಪ್ರದೇಶದಲ್ಲಿರುವ ಗದ್ದಿಕೇರಿ ಬೃಹತ್ ಶಿಲಾಯುಗ ಸಂಸ್ಕೃತಿಯ ವಸತಿ ಮತ್ತು ಕಲ್ಗೋರಿಗಳ ನೆಲೆಯಾಗಿದೆ. ಇಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಸುಮಾರು ೧೦ ವೃತ್ತ ಶೀಲಾಗೋರಿಗಳಿವೆ.[೧೮] ಸ್ಥಳೀಯರು ಇವುಗಳನ್ನು ನೆಲಗೋರಿಗಳು ಎಂದು ಕರೆಯುತ್ತಾರೆ. ಅಲ್ಲದೆ ಪಾಂಡವರು ವಾಸಿಸುತ್ತದ್ದ ಜಾಗ ಎಂತಲೂ ನಂಬಿದ್ದಾರೆ. ಇದು ಬೃಹತ್ ಶಿಲಾಯುಗ ಸಂಸ್ಕೃತಿಯ ವಸತಿ ನೆಲೆಯಾಗಿರುವುದರಿಂದ ಕೆಂಪು ಮತ್ತು

ಪ್ಪು ಬಣ್ಣದ ಹೊಳವುಳ್ಳ ಮಡಿಕೆಯ ಚೂರುಗಳೂ, ವಿವಿಧ ಗೆರೆಗಳುಳ್ಳ ಕೆಂಪುಬಣ್ಣದ ಮಡಿಕೆಯ ಂಠಗಳು, ತೆಳುವಾದ ನಯವಲ್ಲದ ಕುಡಿಕೆಯ ಚೂರುಗಳು ದೂರೆತಿವೆ. ಕಬ್ಬಿಣದ ವಿವಿಧ ಗಾತ್ರದ ಕಿಟ್ಟದ ಲ್ಲುಗಳು ಕೂಡ ಕಂಡುಬಂದಿವೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಹಂಪಸಾಗರ ಗ್ರಾಮದಲ್ಲಿ ಈ ಸಂಸ್ಕೃತಿಯ ಗೋರಿ ನಲೆಯಿದ್ದು, ಅದರಲ್ಲಿ ಸುಟ್ಟ ಮಣ್ಣಿನ ಶವಪೆಟ್ಟಿಗೆ ದೊರೆತಿದೆ. ಈ ಸಮಾಧಿ ಕಂಡು ಬಂದಿರುವ ಜಮೀನಿನಲ್ಲಿ ಸುಮಾರು ೪ ಎಕರೆ ಭೂಮಿಯ ಮಣ್ಣು ಬೂದಿ ಬಣ್ಣದ್ದಾಗಿದೆ. ಪ್ರಾಯಶಃ ಇಲ್ಲಿ ಪಶುಪಾಲನೆ ಸಂಸ್ಕೃತಿಯಿಂದ ಸಂಗ್ರಹವಾದ ಸಗಣಿಯನ್ನು ೧೨೦೦$^{0}$ ಸೆಂಟಿಗ್ರೇಡ್ ಶಾಖದಲ್ಲಿ ಸುಟ್ಟರುವುದರಿಂದ ಈ ಬೂದಿ ಮಣ್ಣು ನಿರ್ಮಾಣವಾಗಿರಬಹುದು. ಕುಡತಿನಿ (ಬಳ್ಳಾರಿ ಜಿಲ್ಲೆ) ಮತ್ತು (ರಾಯಚೂರು ಜಿಲ್ಲೆ) ಯಲ್ಲಿ ರಾಬರ್ಟ್ ಬ್ರೂಸ್‌ಪೂಟ್ ಅವರು ನವಶಿಲಾಯುಗಕ್ಕೆ ಸೇರಿದ ಬೂದಿ ದಿನಗಳನ್ನು ಪತ್ತೆ ಹಚ್ಚಿದ್ದಾರೆ. ಗುತ್ತಲ ಹುಣಿಸೆ ಗ್ರಾಮದ ೪ ಎಕರೆ ಜಮೀನಿನಲ್ಲಿ ದೊಡ್ಡ ಪ್ರಮಾಣದ ಪಶುಪಾಲನೆ ಸಂಸ್ಕೃತಿ ನೆಲೆಸಿತ್ತು ಎಂದು ಇಲ್ಲಿರುವ ಬೂದಿ ದಿಬ್ಬ ಅವಶೇಷಗಳಿಂದ ಗ್ರಹಿಸಬಹುದು. ಅಲ್ಲದೆ ಇಲ್ಲಿ ಕೆಂಪು ಬಣ್ಣದ ಮಡಿಕೆಯ ಚೂರುಗಳು ಅಧಿಕವಾಗಿ ದೂರತಿವೆ.[೧೩]

ದಶಮಾಪುರ ಗ್ರಾಮದ ಉತ್ತರ ಮತ್ತು ಪೂರ್ವ ಭಾಗದಲ್ಲಿ ಗುಡ್ಡಗಳಿಂದಾವೃತವಾಗಿದ್ದು, ಕುರುಚಲ ಅರಣ್ಯ ಪ್ರದೇಶವಿದೆ. ಅಲ್ಲಿನ ತಿಮ್ಮಪ್ಪ ದೇವರು ಇರುವುದರಿಂದ ಸ್ಥಳೀಯ ಜನರು ಗುಡ್ಡದ ತಿಮ್ಮಪ್ಪನ ಅಡವಿ ಎಂದು ಕರೆಯುತ್ತಾರೆ.ಈ ಅರಣ್ಯದ ಪೂರ್ವಕ್ಕೆ ಹೊಂದಿಕೊಂಡಂತೆ ಕರಡಿ ಗುಡ್ಡವಿದೆ. ಇದಕ್ಕೆ ವಾಲಿಕೊಂಡು ಮನಿಗುಡ್ಡವಿದೆ. ಕರಡಿಗುಡ್ಡದ ಪಶ್ಚಿಮ ಇಳಿಜಾರು ಪ್ರದೇಶದಲ್ಲಿ ಬೃಹತ್ ಶಿಲಾಯುಗದ ಕಾಲಕ್ಕೆ ಸೇರಿದ ಒಟ್ಟು ೧೯ ಕಲ್ಲುವೃತ್ತಗಳಿವೆ. ಹೆಚ್ಚಾಗಿ ವೃತ್ತಾಕಾರದಲ್ಲಿದ್ದರೂ ಕೆಲವು ಆಯಾತಾಕಾರದಲ್ಲಿದ್ದಂತೆ ಕಾಣಿಸುತ್ತವೆ. ಅವುಗಳನ್ನು ನಿರ್ಮಿಸುವಲ್ಲಿ ಅಷ್ಟೊಂದು ದೊಡ್ಡದಾದ ಕಲ್ಲುಗಳನ್ನು ಬಳಸದೇ ಪಕ್ಕದ ಗುಡ್ಡಗಾಡುಗಳಲ್ಲಿ ದೊರೆಯುವ ಕಲ್ಲುಗಳನ್ನು ಉಪಯೋಗಿಸಿದ್ದಾರೆ. ಸದ್ಯ ಭೂಮಿಯಿಂದ ೧ ರಿಂದ ೨ ಅಡಿಯವರೆಗೂ ಎತ್ತರದಲ್ಲಿರುವ ಈ ಕಲ್ಲುವೃತ್ತಗಳು ಇದಕ್ಕಿಂತಲೂ ಎತ್ತರವಿದ್ದ, ಸೂಚನೆ ಎದ್ದು ಕಾಣುತ್ತದೆ. ಏಕೆಂದರೆ ಒಂದರ ಮೇಲೊಂದು ಹೊಂದಿಸಿದ ಕಲ್ಲುಗಳು ಕದಲಿಬಿದ್ದಿವೆ. ಈ ಕಲ್ಲುಗಳು ವೃತ್ತಗಳ ನಡುವೆ ೪ ರಿಂದ ೫ ಅಡಿಯವರೆಗೂ ಸಂಶೋಧಕರು ಭೂ ಅಳತೆ ಮಾಡಿದ್ದಾರೆ. ಈ ಸ್ಥಳದಲ್ಲಿ ಈಗಲೂ ಕಪ್ಪು, ಕೆಂಪುವರ್ಣದ ಹೊಳಪಾದ ಸುಟ್ಟ ಮಡಕೆ ಚೂರುಗಳು ದೊರೆತಿವೆ. ಮೇಲ್ನೋಟದಲ್ಲಿ ಹೆಚ್ಚಾಗಿ ಈ ಕಲ್ಲುವೃತ್ತಗಳು ದಕ್ಷಿಣೋತ್ತರವಾಗಿ ನಿರ್ಮಾಣಗೊಂಡಿವೆ. ಕೆಲವು ಕಲ್ಲು ವೃತ್ತಗಳು ಒಂದಾಕ್ಕೊಂದು ತಾಗಿಕೊಂಡಿದ್ದರೆ, ಹೆಚ್ಚಾಗಿ ಒಂದರಿಂದ

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ದೊರೆತಿರುವ ವಿವಿಧ ಸಂಸ್ಕೃತಿಯ ನೆಲೆಗಳ ಕೋಷ್ಟಕ

| ಕ್ರಸಂ | ನೆಲೆಯ ಹೆಸರು | ಹಳೆಯ ಶಿಲಾಯುಗ | | | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಶಿಲಾ ತಾಮ್ರಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭ ಕಾಲ | ಒಟ್ಟು |
|---|---|---|---|---|---|---|---|---|---|---|---|
| | | ಆದಿ | ಮಧ್ಯ | ಅಂತ್ಯ | | | | ಕಬ್ಬಿಣದ ಕಿಟ್ಟ | ಗೋರಿ | | |
| ೧ | ಹಂಪಸಾಗರ | -- | -- | -- | --- | ✓ | ✓ | | ✓ | ✓ | ೦೪ |
| ೨ | ಗದ್ದಿಕೆರೆ | -- | -- | -- | --- | | ✓ | | --- | --- | ೦೧ |
| ೩ | ದಶಮಾಪೂರ | -- | -- | -- | ---- | ---- | ---- | --- | ✓ | ---- | ೦೧ |
| ಒಟ್ಟು | | -- | -- | -- | ---- | ೦೧ | ೦೨ | ೦೦ | ೦೨ | ೦೧ | ೦೬ |

ಇನ್ನೊಂದರ ನಡುವೆ ಅಂತರವಿದೆ ಇವುಗಳು ಕೋಣೆಯಾಕೃತಿಯಲ್ಲಿ ಕಂಡುಬಂದಿವೆ. ಸ್ಥಳೀಯರು ಅವುಗಳನ್ನು ಮೊರೆಯರ ಮನೆಗಳೆಂದು ಕರೆಯುತ್ತಾರೆ.

## ೨.೩ ಇತಿಹಾಸ ಕಾಲ

ಬಳ್ಳಾರಿ ಜಿಲ್ಲೆಯ ಪ್ರದೇಶವು ಕನ್ನಡ ನಾಡಿನಲ್ಲಿ ಆಳಿದ ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು ಪುರಾತತ್ವದ ಆಧಾರಗಳಾದ ಶಾಸನ, ನಾಣ್ಯ, ಸ್ಮಾರಕಗಳು ಮತ್ತು ಸಾಹಿತ್ಯಿಕ ಕುರುವುಗಳಿಂದ ಮನದಟ್ಟಾಗುವುದು, ಈ ಪ್ರದೇಶದ ಮೌರ್ಯರ, ಶಾತವಾಹನರ, ಕದಂಬರ, ಬಾದಾಮಿ ಚಾಲುಕ್ಯರ, ರಾಷ್ಟ್ರ ಕೂಟರ, ಕಲ್ಯಾಣ ಚಾಲುಕ್ಯರ, ಯಾದವರ, ಹೊಯ್ಸಳರು ಆಳ್ವಿಕೆ ನಡೆಸಿದ್ದಾರೆ. ಅವರಿಗೆ ಬೆಂಬಲವಾಗಿ ಮಹಾಸಾಮಂತ ಅಥವಾ ಮಹಾಮಂಡಳೇಶ್ವರರಾದ ನೊಳೊಂಬರು ಕದಂಬರು, ಸಿಂಧರು ಪ್ರಮುಖರಾಗಿದ್ದಾರೆ. ಇವರು ನೊಳಂಬವಾಡಿ–೧೦೦೦, ಕೋಗಳಿ–೫೦೦, ಕೊಟ್ಟೂರು–೧೨, ಪ್ರದೇಶಗಳನ್ನು ನೋಡಿಕೊಳ್ಳುತ್ತಿದ್ದರು, ವಿಯನಗರ ಹಾಗೂ ವಿಜಯನಗರೊತ್ತರ ಪಾಳೆಗಾರರು ಕೂ ಈ ಪ್ರದೇಶದಲ್ಲಿ ಆಳಿಕೆ ನಡೆಸಿದ್ದಾರೆ.

### ಮೌರ್ಯರು

ಪ್ರಾಚೀನ ಭಾರತದ ಪ್ರಮುಖ ಅರಸು ಮನೆತನವಾದ ಮೌರ್ಯರು ಭಾರತದ ಬಹುಭಾಗವನ್ನು ಆಳಿದರು. ಭಾರತದಲ್ಲಿ ಅರಸು ಮನೆತನದ ಅಡಿಪಾಯ ಮತ್ತು ವ್ಯವಸ್ಥಿತ ಆಡಳಿತ ಪದ್ಧತಿ ಇವರಿಂದಲೇ ಪ್ರಾರಂಭವಾಯಿತೆಂದು ಹೇಳಿದರೆ ತಪ್ಪಾಗಲಾರದು. ಇವರು ಉತ್ತರ ಭಾರತ ಪಾಟಲೀಪುತ್ರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ. ಪೂ. ೪ನೇ ಶತಮಾನದಲ್ಲಿ ಅಧಿಕಾರಕ್ಕೆ ಬಂದರು. ಈ ಮನೆತನದ ಪ್ರಮುಖ ಅರಸನಾದ ಅಶೋಕನ ಕಾಲಕ್ಕೆ ದಕ್ಷಿಣ ಭಾರತವೂ ಇವರ ಸಾಮ್ರಾಜ್ಯದೊಳಗಿದ್ದು ಬಗ್ಗೆ ಅನೇಕ ಶಾಸನಗಳು ದೂರೆತಿವೆ.

ಕ್ರಿ. ಪೂ. ೨೭೨ರಲ್ಲಿ ಅಧಿಕಾರಕ್ಕೆ ಬಂದ ಅಶೋಕನ ಶಾಸನಗಳು ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳದ ಗವಿಮಠ, ಚಿತ್ರದುರ್ಗ ಜಿಲ್ಲೆಯ ಸಿದ್ದಾಪುರ, ಜಟಿಂಗ ರಾಮೇಶ್ವರ ಮತ್ತು ಬ್ರಹ್ಮಗಿರಿಯಲ್ಲಿ ದೊರತಿವೆ. ಬಳ್ಳಾರಿ ಜಿಲ್ಲೆ ಸಿರುಗುಪ್ಪ ತಾಲ್ಲೂಕಿನ ನಿಟ್ಟೂರು ಮತ್ತು ಉಡೇಗೋಳದಲ್ಲಿ ಅಶೋಕ ಶಾಸನಗಳು ಸಿಕ್ಕಿವೆ. ಈ ಶಾಸನಗಳನ್ನು ಕ್ರಿ. ಶ. ೧೯೭೭–೭೮ರಲ್ಲಿ ಡಾ. ಎಸ್. ಶೆಟ್ಟರ, ಡಾ. ಎಸ್. ರಾಜಶೇಖರ್‌ರವರು ಶೋಧಿಸಿದ್ದು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ. ಇವರ ಆಳ್ವಿಕೆಯನ್ನು ಪ್ರಭಾವಿಸುವ ಯಾವದೇ ಕುರುಗಳು ಕಂಡುಬಂದಿಲ್ಲ, ಆದರೆ ಮೇಲೆ ಉಲ್ಲೇಖಿಸಿದ ಅಶೋಕನ ಶಾಸನಗಳ

ಅಧ್ಯಯನದ ಪ್ರದೇಶದಿಂದ ಕೇವಲ ೪೦ ಮೀ ದೂರದಲ್ಲಿ ದೊರೆತಿರುವುದರಿಂದ ಸಹಜವಾಗಿ ಈ ಪ್ರದೇಶ ಮೌರ್ಯರ ಆಳ್ವಿಕೆಗೆ ಒಳಗಾಗಿರುವುದು ಕಂಡುಬರುತ್ತದೆ.

**ಶಾತವಾಹನ**

ಕರ್ನಾಟಕದ ಬಹುಭಾಗವನ್ನಾಳಿದ ಮೊಟ್ಟ ಮೊದಲನೆಯ ಪ್ರಮುಖ ರಾಜವಂಶದವರಾದ ಶಾತವಾಹನರು ತಮ್ಮನ್ನು "ಕುಂತಳಸ್ವಾಮಿ"ಗಳೆಂದು ಕರೆದುಕೊಂಡಿದ್ದಾರೆ. (ಇವರಿಗೆ ಆಂಧ್ರರು, ಆಂಧ್ರ ಭೃತ್ಯರು, ಶಾತಕರಣಿ೯ಗಳು ಎಂದು ಕರೆಯಲಾಗಿದೆ.) ಮೌರ್ಯ ಸಾಮ್ರಾಜ್ಯ ಪತನವಾದ ನಂತರ ಕ್ರಿ ಪೂ. ೨೨೦ ರಿಂದ ಕ್ರಿ. ಶ. ೨೩೦ರವರಗೆ ಸುಮಾರು ೪೫೦ ವರ್ಷಗಳ ಕಾಲ ಇವರು (ಸುಮಾರು ಮೂವತ್ತು ಮಂದಿ ದೊರೆಗಳು) ರಾಜ್ಯವನ್ನಾಳಿದ್ದಾರೆ. ಡಾ. ಸುಕುಂಥರವರು ಶಾತವಾಹನರ ಕುಟುಂಬ ಕನ್ನಡ ಪ್ರದೇಶದಿಂದ ಬಂದಿದೆ ಎಂದು ಹೇಳಿದ್ದಾರೆ. ರಾಜಶೇಖರನ ಕಾವ್ಯಮೀಮಾಂಸೆಯಲ್ಲಿ ವಾತ್ಸಾಯನನ ಕಾಮಸೂತ್ರದಲ್ಲಿ, ಪ್ರಾಕೃತದ ಗಥಸಪ್ತಸತಿಯಲ್ಲಿ "ಹಲ" ಕುಂತಲದ ರಾಜನೆಂದು ಉಲ್ಲೇಖಗೊಂಡಿವೆ. ಪುರಾಣದಲ್ಲಿ ಗೌತಮಿ ಪುತ್ರ ಶಾತಕರ್ಣಿ ಕುಂತಲ ಪ್ರದೇಶವನ್ನು ಆಳುತ್ತಿದ್ದ ಬಗ್ಗೆ ತಿಳಿದುಬರುವುದು.[೧೫] ಪ್ರಸ್ತುತ ಅಧ್ಯಯನದ ಪ್ರದೇಶ ಹಾಗೂ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಶಾತವಾಹನರ ಯಾವುದೇ ಶಾಸನಗಳು ದೊರೆತಿಲ್ಲ ಆದರೆ ಜಿಲ್ಲೆಯ ಮ್ಯಾಕದೋಣಿಯಲ್ಲಿ ದೊರೆತಿರುವ ಶಾಸನವೊಂದು ಇವರ ಆಳ್ವಿಕೆ ಮೇಲೆ ಬೆಳಕು ಚಲ್ಲುತ್ತದೆ.

**ಕದಂಬರು**

ಕರ್ನಾಟಕವನ್ನು ಮೊಟ್ಟಮೊದಲ ಆಳಿದಂತಹ ರಾಜಮನೆತನವೆಂದರೆ ಕದಂಬರು ಇವರು ಬನವಾಸಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಕನ್ನಡನಾಡುನ್ನು ಆಳ್ವಿಕೆ ಮಾಡಿದ್ದಾರೆ.ವ ಹೀಗಾಗಿ ಈ ಮನೆತನಕ್ಕೆ ಕನ್ನಡನಾಡಿನ ಮೊದಲ ಅರಸರು ಎಂಬ ಹೆಗ್ಗಳಿಕೆ ಇದೆ.

ಕರ್ನಾಟಕದ ಮೊದಲ ಅರಸರೆಂಬ ಹೆಗ್ಗಳಿಕೆಗೊಳಗಾದ ಕದಂಬರ ಅಧಿನಕ್ಕೆ ಒಳಪಟ್ಟ ಹಲವು ಪ್ರದೇಶಗಳಲ್ಲಿ ಬಳ್ಳಾರಿ ಜಿಲ್ಲೆಯೂ ಒಂದಾಗಿತ್ತು. ಕದಂಬರ ಶಾಸನಗಳು ಸಾಮಾನ್ಯವಾಗಿ ತಮ್ಮ ಮೂಲ ಪುರುಷನನ್ನು ಮಯೂರ ವರ್ಮನೆಂದು ಉಲ್ಲೇಖಿಸುತ್ತೇವೆ.

ಬಳ್ಳಾರಿ ಜಿಲ್ಲೆ ಕೆಲವು ಪ್ರದೇಶಗಳಲ್ಲಿ ಇವರ ಕಾಲದ ಶಾಸನಗಳು ದೊರತಿವೆ. ಹಗರಿಬೊಮ್ಮನಹಳ್ಳಿ ತಾಲೂಕು ಅಂಬಳಿ ಗ್ರಾಮದ ಕಲ್ಲೇಶ್ವರ ದೇವಾಲಯದ ಮುಂದೆ ಮಂಟಪದ ತೊಲೆಯ ಮೇಲಿರುವ ಒಂದು ಶಾಸನವು ಕದಂಬವಂಶದ ಜಗದಳಪಾಂಡ್ಯನು ೪೦೦ ಕಮ್ಮ ಭೂಮಿಯನ್ನು ಅಮ್ಮಳೆಯ

ಕಲಿದೇವರಿಗೆ ದಾನ ನೀಡಿರುವುದನ್ನ ಉಲ್ಲೇಕಿಸುತ್ತದೆ. ಈ ಶಾಸನವು ಕಾವ್ಯಮಯವಾಗಿದೆ. ಈ ಶಾಸನವನ್ನು ಕೆತ್ತಿದವನು ಬಸವೋಜನ ಮಗ ಕೇತೋಜ ಎಂಬುದು ತಿಳಿದುಬರುತ್ತದೆ. ಈ ಶಾಸನವನ್ನು ಬಿಟ್ಟಾರೇ ಅಧ್ಯಯನ ಈ ಇತರ ಯಾವುದೇ ಶಾಸನಗಳು ಕಂಡು ಬರುವುದಿಲ್ಲ.

## ಬಾದಾಮಿ ಚಾಲುಕ್ಯ

ಕನ್ನಡ ನಾಡಿನ ಪ್ರಸಿದ್ಧ ಅರಸು ಮನೆತನಗಳಲ್ಲಿ ಚಾಲುಕ್ಯ ಮನೆತನವು ಒಂದಾಗಿದೆ. ದಕ್ಷಿಣ ಭಾರತದಲ್ಲಿ ಚಾಲುಕ್ಯ ಮನೆತನದ ಪ್ರಭಾವವು ಗಣನೀಯವಾದದ್ದು. ಕ್ರಿ. ಶ. ೬ನೇ ಶತಮಾನದಿಂದ ಕ್ರಿ. ಶ. ೮ನೇ ಶತಮಾನದವರೆಗೂ ಪುನಃ ಕ್ರಿ. ಶ. ೧೦ನೇ ಶತಮಾನದಿಂದ ಕ್ರಿ. ಶ. ೧೬ನೇ ಶತಮಾನದವರೆಗೂ ಇವರು ಆಳಿದರು. ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು ಮತ್ತು ವೆಂಗಿಯ ಚಾಲುಕ್ಯರು ಎಂಬ ಮೂರು ಶಾಖಾ ಮನೆತನಗಳು. ಚಾಲುಕ್ಯರಲ್ಲಿ ಕಂಡು ಬರುತ್ತದೆ. ಅಖಂಡ ಕರ್ನಾಟಕದ ಪ್ರಪ್ರಥಮ ಚಕ್ರವರ್ತಿಗಳಾಗಿ ಬಾದಾಮಿಯ ಚಾಲುಕ್ಯರು ಇನ್ನೂರು ವರ್ಷಗಳ ಕಾಲ ಕ್ರಿ. ಶ. ೭೫೩ ರವರೆಗೆ ವೈಭವದಿಂದ ಆಳಿದ್ದಾರೆ[೧೬]

ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಬಾದಮಿ ಚಾಲುಕ್ಯರ ಕಾಲಕ್ಕೆ ಸೇರಿದೆ ಕೆಲವು ಶಾನಗಳು ಕಂಡುಬರುತ್ತವೆ. ಬಾದಾಮಿ ಚಾಲುಕ್ಯರ ಅರಸ ಆಹಮದಮಲ್ಲದೇವನ ಆಳ್ವಿಕೆ ಕಾಲಕ್ಕೆ ಸೇರಿದ ಶಾಸನವೊಂದು ಈ ತಾಲ್ಲೂಕಿನ ಕೋಗಳಿ ಗ್ರಾಮದಲ್ಲಿ ದೊರೆತಿದೆ. ಕ್ರಿ. ಶ. ೯೯೨ರ ಈ ಶಾಸನ ಸಾಮಂತ ಅರಸ ದಶಾಶ್ವಮೇಧ ದೀಕ್ಷಿತನಾದ ಕದಂಬವಂಶದವನಾದ ಆದಿತ್ಯವರ್ಮಸನು ಕೋಗಳಿ ೫೦೦ ಮತ್ತು ಸುನ್ನವತ್ತಿ-೧೨ ನ್ನು ಆಳುತ್ತಿದ್ದ ಎಂಬುದರಿಂದ ತಿಳಿದುಬರುತ್ತದೆ. ತಳಕಲ್ಲು ಗ್ರಾಮದ ಈಶ್ವರ ದೇವಾಲಯ ಬಳಿಯ ಒಂದು ಶಾಸನ ಬಾದಾಮಿ ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲನು ನೊಳಂಬಪೆರ್ಮಾಡಿಯು ಕೋಗಳಿ-೫೦೦, ಬಲ್ಲಕುಂದೆ-೩೦೦, ಕದಂಬಳಿಗೆ-೧೦೦೦ನ್ನು ಬೀಳವೃತ್ತಿಯಾಗಿ ಆಳುತ್ತಿದ್ದಾಗ, ಅವನ ಅಧೀನನಾದ ಸಿಂದ ಅರಸ ಬರ್ಮದೇವನು ಕೋಗಳಿ ಐನೂರಕ್ಕೆ ತೋರಣಕಲಿ, ಹಲಿಮಯಿಹನ್ನೆರಡುನ್ನು ಆಳಿತ್ತಿದಾಗ ಚಾಮುಂಡಯ್ಯನು ಕೆರೆಯ ಜೀರ್ಣೋದ್ಧಾರಕ್ಕಾಗಿ ೧೨ ಮತ್ತರವನ್ನು ದಾನವಾಗಿ ಬಿಟ್ಟನು ಎಂದು ಉಲ್ಲೇಕಿಸುತ್ತದೆ. ಚಿಮ್ನಹಳ್ಳಿ ಗ್ರಾಮದ ಆಂಜನೇಯನ ಗುಡಿಯಲ್ಲಿನ ಕ್ರಿ. ಶ. ೧೦೩೪ರ ಶಾಸನ ಬಾದಾಮಿ ಚಾಲುಕ್ಯ ದೊರೆ ಜಗದೇಕಮಲ್ಲನ ಕಾಲದಲ್ಲಿ ಅರಸ ಸಾಮಂತ ಜಗದೇಕಮಲ್ಲ ನೊಳಂಬಪಲ್ಲವ ಪೆರ್ಮಾಡಿಯು ಕದಂಬಳಿಗೆ-೧೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಕುದಿಯಹರವಿ-೭೦ ಮತ್ತು ಕರಿವಿಡಿ-೨೦ ಆಳುತ್ತಿದ್ದಾಗ, ಇವನು ಮನೆವೆಗ್ಗಡೆ ಕೇತನಾಯಕನು ನೆಲ್ಕುದುರೆ ಆಳುತ್ತಿದ್ದಾಗ ದುಗ್ಗರಾಜಪಡಿತರ ಕಾಲನ್ನು ತೊಳೆದು ಕಲಿದೇವರಿಗೆ ಭೂದಾನ ನೀಡುತ್ತಾನೆ. ಮೊರಿಗೇರಿ ಗ್ರಾಮದ ಉದ್ದಿ ಬಸವಣ್ಣ ಗುಡಿಯಲ್ಲಿ ಇರಿಸಿರುವ ಕ್ರಿ. ಶ. ೧೦೪೫ರ ಶಾಸನ ಬಾದಾಮಿ

ಚಾಲುಕ್ಯ ದೊರೆ ತ್ರೈಲೊಕ್ಯಮಲ್ಲ ಆಹವಮಲ್ಲ ದೇವನು ರಾಜ್ಯಭಾರ ಮಾಡುತ್ತಿದ್ದೇನೆಂದು ತಿಳಿದುಬರುವುದು. ಕೋಗಳಿ ಗ್ರಾಮದ ಚಾವಡಿ ಬಳಿ ಇರುವ ಕ್ರಿ. ಶ. ೧೦೭೪ರ ಒಂದು ವೀರಗಲ್ಲು ಶಾಸನವು ಬಾದಾಮಿ ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲ ಸಾಮಂತ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾಡಿ ಕಾಲದಲ್ಲಿ ಉದಯಾದಿತ್ಯ ಏಚನಾಯಕ ಘಟ್ಟಿದೇವನ ಆಜ್ಞೆಯಂತೆ ಕುದುರೆ ಎಂದು ಹೋಗಿ ಹಸುಗಳನ್ನು ಕದ್ದೊಯ್ಯುತ್ತಿದ್ದ ಕಳ್ಳರನ್ನು ಸದೆಬಡಿದು ಕೋಗಳಿಯ ಹಸುಗಳನ್ನು ಹಿಂತಿರುಗಿಸಿ ದಾನು ಮಾಡುತ್ತಾನೆ. ಇದೇ ಗ್ರಾಮದ ಊರಿನ ಬಸದಿಯ ಎದುರುಗಡೆಯ ಶಾಸನವು ಒಂದು ಕ್ರಿ. ಶ. ೧೦೫೫ರಲ್ಲಿ ಬಾದಾಮಿ ಚಾಲುಕ್ಯರ ದೋರೆ ತ್ರೈಲೋಕ್ಯಮಲ್ಲನ ಆಳ್ವಿಕೆಯಲ್ಲಿ ಇಂದ್ರಕೀರ್ತಿ ಮುನೀಂದ್ರನು ಕೋಗಳಿಯಲ್ಲಿ ದುರ್ವಿನೀತನಿಂದ ರಚಿತವಾದ ಬಸದಿಗೆ ಕೋಗಳಿಯ ನಾಡಿಗೆ ಸೇರಿದ ಇಟ್ಟಿಗೆಯಲ್ಲಿ ೨೪ ಮತ್ತರು ಭೂಮಿಯನ್ನು ದಾನ ನೀಡುತ್ತಾನೆ. ಈ ಮೇಲಿನ ಎಲ್ಲ ಶಾಸನಗಳು ಪ್ರಸ್ತುತ ಅಧ್ಯಯನ ಪ್ರದೇಶದ ಸುತ್ತಮುತ್ತಲಿನ ಗ್ರಾಮಗಳಲ್ಲಿ ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ತಂಬ್ರಹಳ್ಳಿ ಗ್ರಾಮದಲ್ಲಿ ಅವರ ಆಳ್ವಿಕೆಯನ್ನು ಗುರುತಿಸಬಹುದು.

**ರಾಷ್ಟ್ರಕೂಟರ**

ಎಂಟನೆಯ ಶತಮಾನದ ಮಧ್ಯ ಭಾಗದ ವೇಳೆಗೆ ದಖ್ಖನ್ನಿನಾಧಿಪತ್ಯವು ಚಾಲುಕ್ಯರಿಂದ, ರಾಷ್ಟ್ರಕೂಟರ ಕೈಸೇರಿತು. ಇವರ ಪ್ರಾಬಲ್ಯವು ಸುಮಾರು ೧೦ನೇ ಶತಮಾನದ ಕೊನೆಯವರೆಗೂ ಮುಂದುವರೆದ್ದಿತ್ತು. ಇವರ ಕಾಲದಲ್ಲಿ ಕಲೆ, ಸಾಹಿತ್ಯಗಳು ಸಮೃದ್ಧಿವಾದವು ಜೊತೆಗೆ ವೈವಿಧ್ಯ ಪೂರ್ಣವೂ ಆಗಿದ್ದವು ರಾಷ್ಟ್ರಕೂಟರ ಮನೆತನಗಳಲ್ಲಿ ಮಾನ್ಯಖೇಡದ ಶಾಖೆ ಪ್ರಮುಖವಾದುದ್ದು[೧೭] ಬಳ್ಳಾರಿ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಶಾಸನಗಳು ಬಹುಸಂಖ್ಯೆಯಲ್ಲಿ ದೊರೆಯುತ್ತಿರುವುದರಿಂದ ಈ ಭಾಗದಲ್ಲಿ ಅವರ ಆಳ್ವಿಕೆಯನ್ನು ಗುರುತಿಸಲು ಸಾಧ್ಯವಾಗಿದೆ.

ಚಾಲುಕ್ಯ ಕುಟುಂಬದ ಎರಡನೇ ತೈಲಪನಿಂದ ರಾಷ್ಟ್ರಕೂಟರ ಅರಸ ಎರಡನೇ ಕರ್ಕನು ಯುದ್ಧದಲ್ಲಿ ಸೋತನೆಂದು ತಿಳಿದುಬರುತ್ತದೆ. ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗುಳಿ ಗ್ರಾಮದ ವೀರಭದ್ರ ದೇವಾಲಯದ ಬಳಿ ಗೋಡೆಗೆ ಒರಗಿಸಿರುವ ಶಾಸನವು ಕ್ರಿ.ಶಸುಮಾರು ೮ನೇ ಶತಮಾನಕ್ಕೆ ಸೇರಿದ್ದಾಗಿದೆ. ದಿವಸಕರ (ಸೂರ್ಯ)ನ ವಿಗ್ರಹವನ್ನು ಶಿವನಂದಿಯ ಮೊಮ್ಮಗ ಮಾಡಿದನೆಂದು ಹೇಳಿದೆ. ಇದೇ ಗ್ರಾಮದಲ್ಲಿ ಹನುಮಂತನ ಗುಡಿಯ ಎದುರು ಇರುವ ಒಂದು ವೀರಗಲ್ಲು ಕಂಡುಬಂದಿದೆ. ಸುಮಾರು ಕ್ರಿ. ಶ ೯ನೇ ಶತಮಾನಕ್ಕೆ ಸೇರಿದ್ದು ರಾಷ್ಟ್ರಕೂಟ ಅರಸನ ಕಾಲದಲ್ಲಿ ಹೆಗ್ಗಡೆ ತೊಮ್ಮನೆಂಬುವವನು ಕಾದಿ ಸತ್ತಾಗ ಅವನ ಹೆಂಡತಿ ಬಳಕ್ಕ ಈ ಶಾಸನವನ್ನು ನಿಲ್ಲಿಸಿದಳೆಂದು ಉಲ್ಲೇಖಿಸಲಾಗಿದೆ. ಈ ಆಧಾರಗಳು ಈ ಭಾಗದಲ್ಲಿ ರಾಷ್ಟಕೂಟರ ಆಳ್ವಿಕೆಯನ್ನು ವದಗಿಸಿಕೊಡುತ್ತದೆ.

## ಕಲ್ಯಾಣದ ಚಾಲುಕ್ಯರು

ಕಲ್ಯಾಣದ ಚಾಲುಕ್ಯರು ಕ್ರಿ ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಶೇಷವಾಗಿ ಕರ್ನಾಟಕದ ಇತಿಹಾಸದಲ್ಲಿ ಮಹತ್ತರವಾದ ಪಾತ್ರವಹಿಸಿದ್ದಾರೆ. ಕರ್ನಾಟಕದುದ್ದಕ್ಕೂ ಆಳ್ವಿಕೆ ನಡೆಸಿ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಲ್ಲದೆ ದಾನದತ್ತಿಗಳನ್ನು ಯುದ್ಧದ ಸನ್ನಿವೇಶಗಳನ್ನು ವಿವರಿಸುವಂತಹ ಹಲವು ಶಾಸನಗಳನ್ನು ರಚಿಸಿದ್ದಾರೆ. ಹಗರಿಬೊಮ್ಮನಹಳ್ಳಿ ತಾಲೂಕಿನ ಮೊರಿಗೇರಿ ಗ್ರಾಮದಲ್ಲಿ ಬಸವಣ್ಣನ ಗುಡಿಯಲ್ಲಿ ಇರುವ ಶಾಸನ. ಇದು ಕ್ರಿ ಶ ೧೦೪೫ರ ಕಲ್ಯಾಣ ಚಾಲುಕ್ಯರ ತ್ರೈಲೋಕ್ಯಮಲ್ಲ ಅವಮಲ್ಲದೇವನು ರಾಜ್ಯಭಾರ ಮಾಡಿದನೆಂದು ತಿಳಿಸುತ್ತದೆ. ಅಂಬಳಿ ಗ್ರಾಮದ ಆಂಜನೇಯ ದೇವಾಲಯದ ಮುಂದೆ ಇರುವ ಶಾಸನ ಕ್ರಿ. ಶ. ೧೧೪೩ ಕಾಲವಧಿಯದ್ದಾಗಿದೆ. ಇಮ್ಮಡಿ ಜಗದೇಕಮಲ್ಲ ಕಲ್ಯಾಣವನ್ನು ಆಳ್ವಿಕೆ ಮಾಡುತ್ತಿದ್ದಾಗ ಅವನ ಸಾಮಂತ ಜಗದೇಕಮಲ್ಲ ವೀರಪಾಂಡ್ಯದೇವನು ನಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಕದಂಬ ವಂಶದ ಘಟ್ಟಿದೇವನ ಮಗ ಕೊಟ್ಟೂರಿನಲ್ಲಿದ್ದು ಅಮ್ಮಳೆಯಲ್ಲಿ ಜ್ಞಾನಪ್ರಕಾಶ ಭಟ್ಟಾರಕರು ಮಾಡಿಸಿದ್ದ ನರಸಿಂಹ ದೇವರಿಗೆ ಭೂದಾನ ಮಾಡಿದ ಎಂದೂ ಉಲ್ಲೇಖವಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇವರ ಕಾಲದ ಶಾಸನಗಳಾವು ಕಂಡುಬರುವುದಿಲ್ಲ. ಆದರೆ ಮೇಲೆ ವಿವರಿಸಿದ ಶಾಸನಗಳು ತಂಬ್ರಹಳ್ಳಿ ಪರಿಸರದ ಆಳ್ವಿಕೆ ಒಳಪಟ್ಟಿರುವುದನ್ನು ಪರೋಕ್ಷವಾಗಿ ಪ್ರಸ್ತಾಪಿಸುತ್ತವೆ.

## ಸೇವುಣರು

ಕ್ರಿ.ಶ. ೮೩೫ ರಿಂದ ೧೩೧೩ರ ವರೆಗೆ ಆಳಿದ ಕರ್ನಾಟಕ ಸೇವಣರು ವಿಶೇಷವಾಗಿ ದೇವಗಿರಿಯ ಯಾದವರೆಂದೇ ಭಾರತದ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ. ಮಹಮ್ಮದೀಯ ಚರಿತ್ರಕಾರರಾದ ಅಮೀರ್ ಖುಸ್ರೋ, ಪೆರಿಸ್ತಾ, ಬರೌನಿ ಮುಂತಾದವರು ಸೇವುಣರನ್ನು ಯಾದವರೆಂದು ಕರೆದಿದ್ದಾರೆ. ಇವರ ಆಳ್ವಿಕೆಯನ್ನುಳಿಸುವ ಆಧಾರಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸೇವುಣರ ಆಳ್ವಿಕೆಯ ಕುರಿತಂತೆ ಯಾವುದೇ ಆಕಾರಗಳು ದೊರೆತಿಲ್ಲವಾದರು ಹಗರಿಬೊಮ್ಮನಹಳ್ಳಿ ತಾಲೂಕಿನ ಏಣಗಿ ಗ್ರಾಮದ ಆಂಜನೇಯ ಗುಡಿಯಲ್ಲಿರುವ ಶಾನವೊಂದು ಇವರ ಆಳ್ವಿಕೆಯ ಮೇಲೆ ಬೆಳಕು ಚೆಲ್ಲುತ್ತದೆ. ಮುಂದೆನ ಶಾಸನ ಕ್ರಿ. ಶ. ೧೨೫೯ರ ಶಾಸನ ಕಂಧರರಾಯನು ದೇವಗಿರಿಯ ನೆಲೆವೀಡಿನಲ್ಲಿದ್ದಾಗ, ಸಕಲವೇದ ಶಾಸ್ತ್ರಪಾರಂಗತರು ಔಪಾಸನ, ಅಗ್ನಿಹೋತ್ರಗಳನ್ನು ನೆಡೆಸುವವರೂ, ರಿಪುಕುಳಕದಳೀವನ ಕುಂಜರರೂ, ಶರಣಾಗತವಜ್ರಪಂಜರರೆನಿಸಿಕೊಂಡ ಕುಂತಳದೇಶದ ನಾಸಿಕವಾದ ನೊಳಂಬವಾಡಿಯ ದೃಷ್ಟಿಯಂತಿದ್ದ ಕೋಗಳಿನಾಡಿಗೆ ಸೇರಿದ ಪೂವಿನಪಡಂಗಲಿಯ ನೂರಿಪ್ಪತ್ತು ಮಹಾಜನರು ಕುಸ್ಮನಾಥದೇವರಿಗೆ ಖಂಡಸ್ಫುಟಿತ ಜೀರ್ಣೋದ್ದಾರಕ್ಕಾಗಿ ಭೂದಾನ ನೀಡಿರುವುದನ್ನು ಪ್ರಸ್ತುತಪಡಿಸುತ್ತದೆ.

ಚಿಮ್ನಹಳ್ಳಿ ಆಂಜನೇಯ ದೇವಸ್ಥಾನದ ಬಳಿ ಕಲ್ಲಿನಲ್ಲಿರುವ ಇನ್ನೊಂದು ಶಾಸನ ಕ್ರಿ. ಶ. ೧೧೦೮೭ರ ಶುಕ್ರವಾರ (ಕಾಲ ಸರಿಹೊಂದುತ್ತಿಲ್ಲ) ದಂದು ಮಾರಿಟ ಮೂನೂ ಮಂನೆಯ ಬೆನ್ನರಸನು ಕಂಬೇಶ್ವರದೇವರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಹಾಗೂ ಹಾಡುಗಾರರಿಗೆ ಭೂದಾನ ನೀಡಿದ್ದರು ತಿಳಿಸುತ್ತದೆ. ಈ ಸಮಯದಲ್ಲಿ ಮಾಂಡಳಿಕ ಜೊಯಿಮಯ್ಯರಸನು ಇನ್ನೂರು ಮತ್ತು ಕಲ್ಲಕೆಳಗೆ ಇನ್ನೂರನ್ನು ಆಳುತ್ತಿದ್ದನೆಂದು ಈ ಶಾಸನ ತಿಳಿಸುತ್ತದೆ.[೧೮]

## ಹೊಯ್ಸಳರು

ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಸೇವುಣರಂತೆ ಹೊಯ್ಸಳರೂ ಅವರು ಮಾಂಡಳೀಕರಾಗಿ ಕೆಲವು ಭಾಗಗಳ ಆಡಳಿತ ನೋಡಿಕೊಳ್ಳುತ್ತಿದ್ದರು. ಇವರು ತಮ್ಮನ್ನು ಯಾದವ ವಂಶಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಶಾಸನಗಳಲ್ಲಿ ತಮ್ಮನ್ನು 'ಯಾದವ ನಾರಾಯಣ' ಯಾದವಕುಲಾಂಬಿರದ್ಯುಮಣಿ' ದ್ವಾರಾವತಿ ಪುರವಾಧೀಶ್ವರ' ಮುಂತಾದ ಬಿರುದುಗಳಿಂದ ಗುರುತಿಸಿಕೊಂಡಿದ್ದಾರೆ. ಈ ಮನೆತನದ ಮೂಲಪುರುಷ ಹುಲಿಯನ್ನು ಕೊಂದನೆಂದು ರಾಜಮನೆತನಕ್ಕೆ ಹೊಯ್ಸಳ ಎಂಬ ಹೆಸರು ಮತ್ತು ಬಂದಿದೆ ಹುಲಿಯನ್ನು ಕೊಲ್ಲುತ್ತಿರುವ ಚಿತ್ರಣವನ್ನು ತಮ್ಮ ಲಾಂಛನವನ್ನಾಗಿ ಮಾಡಿಕೊಂಡರು ಈ ಮನೆತನದ ಮೊದಲ ಅರಸ ಕಾಮ ಇವನ್ನು ನೃಪಕಾಮನೆಂದು ಕರೆಯಲಾಗಿದೆ.[೧೯]

ಹಗರಿಬೊಮ್ಮನಹಳ್ಳಿ ತಾಲೂಕು ಕೋಗುಳಿ ಕಲ್ಲೇಶ್ವರ ದೇವಾಲಯದ ಮುಂದಿರುವ ಕ್ರಿ. ಶ, ೧೧೯೩ರ ಶಾಸನವೊಂದು ಹೊಯ್ಸಳರ ದೊರೆ ವೀರನರಸಿಂಹ ದೇವನ ಸೋಮದಂಡನಾಯಕನು ಮಹಾಪ್ರಧಾನನಾಗಿದ್ದಾಗ ಸೋಮನಾಥ ದೇವರ ಪೂಜೆಗಾಗಿ ಭೂದಾನ ನೀಡಿದನೆಂದು ಈ ಶಾಸನ ತಿಳಿಸುತ್ತದೆ. ಬೆಣ್ಣೆಕಲ್ಲು ಗ್ರಾಮದ ಕ್ರಿ. ಶ. ೧೨೨೬ರ ಶಾಸನ ವೀರನರಸಿಂಹನ ಕಾಲದಲ್ಲಿ ವಾಮರಸನ ಮಗನಾದ ಮಹಾಪ್ರಧಾನ ಅಮಿತಯ್ಯ ದಂಡನಾಯಕನು ನಳಂಬವಾಡಿ ನಾಡಿನ ಕೋಗುಳಿ ೫೦೦ರ ಬೆಣ್ಣೆಕಲ್ಲು ೧೨ರ ಮುಖ್ಯ ಪಟ್ಟಣವಾದ ಬೆಣ್ಣೆಕಲ್ಲಿನಲ್ಲಿ ಪದ್ಮಲೇಶ್ವರ, ಅಮೃತೇಶ್ವರ, ಲಕ್ಷ್ಮೀನಾರಾಯಣ, ವಾಮೇಶ್ವರ, ಬಲ್ಲೇಶ್ವರ, ನರಸಿಂಹದೇವರ ದೇವಾಲಯಗಳನ್ನು ಕಟ್ಟಿಸಿದನೆಂಬ ಉಲ್ಲೇಖವಿದೆ. ಈ ಆಧಾರಗಳಿಂದ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹೊಯ್ಸಳರ ಆಳ್ವಿಕೆ ಇರುವುದನ್ನು ಗುರುತಿಸಬಹುದು.

## ವಿಜಯನಗರ ಅರಸರ

ಹೊಯ್ಸಳ ಸಾಮ್ರಾಜ್ಯವು ಪತನ ಹೊಂದಿದ ತರುವಾಯ ಹಿಂದೂ ಧರ್ಮ ರಕ್ಷಣೆಗೆಂದು ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು ಮರೆತು ಹೋದ ಹಾಗೂ ಎಂದಂದೂ ಮರೆಯಲಾಗದ ಮಹಾ ಸಾಮ್ರಾಜ್ಯ ಎಂದು ವಿದ್ವಾಂಸರು ವರ್ಣಿಸಿದ್ದಾರೆ[೨೦] ಅಷ್ಟೇ ಅಲ್ಲದೆ ವಿದೇಶಿ

ಲೇಖಕರು, ಪ್ರವಾಸಿಗರು, ವರ್ತಕರು, ಇತಿಹಾಸಕಾರರು, ವಿಜಯನಗರದ ಭವ್ಯತೆಯನ್ನು ಮನಸಾರೆ ಕೊಂಡಾಡಿದ್ದಾರೆ. ಕ್ರಿ. ಶ. ೧೩೩೬ರಿಂದ ೧೫೬೫ರವರಗೆ ಆಳ್ವಿಕೆ ನಡೆಸಿದ ವಿಜಯನಗರ ಅರಸರು ನೇರವಾಗಿ ಇಲ್ಲವೇ ಅವರ ಸಾಮಂತರು ಇಂದಿನ ಹಡಗಲಿ ಮತ್ತು ಬಳ್ಳಾರಿ ಜಿಲ್ಲೆಯ ಕೆಲವು ಭಾಗಗಳನ್ನು ತಮ್ಮ ಅಧಿನದಲ್ಲಿಟ್ಟುಕೊಂಡು ಆಳ್ವಿಕೆ ನಡೆಸಿದ್ದಾರೆ. ಕ್ರಿ. ಶ. ೧೩೫೪ರಿಂದ ಸದಾಶಿವರಾಯನ ಕಾಲದವರೆಗಿನ ಶಾಸನಗಳೂ ಇಲ್ಲಿ ದೊರೆತಿವೆ. ಅವುಗಳ ಇವರ ಚರಿತ್ರೆಯನ್ನು ರಚಿಸಲು ಸಹಾಯಕವಾಗಿದೆ.

ಈ ವಂಶದ ಕೃಷ್ಣದೇವರಾಯ, ಅಚ್ಯತರಾಯ ಮತ್ತು ಸದಾಶಿವರಾಯನ ಕಾಲಾವಧಿಯ ಶಾಸನಗಳು ಹೆಚ್ಚಾಗಿ ಈ ತಾಲ್ಲೂಕಿನ ವಿವಿಧ ಗ್ರಾಮದಲ್ಲಿ ಕಂಡುಬರುತ್ತವೆ. ತಂಬ್ರಹಳ್ಳಿ ಪರಿಸರದಲ್ಲಿ ಅವರ ಯಾವುದೇ ಶಾಸನಗಳು ಕಂಡುಬಂದಿಲ್ಲ ಆದರೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಅಲಬೂರು ಗ್ರಾಮದ ಒಂದು ಶಾಸನ ವಿಜಯನಗರ ದೊರೆ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಅಂದರೆ ೧೫೧೮ ಸೋಲೂರ ಬಸವಪ್ಪನಾಯಕನ ಮಗ ಕೃಷ್ಣಪ್ಪನಾಯಕನು ಅಲಭುರಿನ ಹೊಂನತೀದೇವಿಗೆ ಮಾಡಿದ ಭೂದಾನದ ವಿವರಗಳನ್ನು ತಿಳಿಸುತ್ತದೆ. ಕ್ರಿ.ಶ. ೧೫೩೧ರಲ್ಲಿ ಕೋಗಳಿಯ ವೀರಭದ್ರದೇವರನ್ನು ಕೊಟ್ಟೂರ ತಿಪ್ಪಿಸೆಟ್ಟೆ ಪ್ರತಿಷ್ಠಾಪಿಸಿದ. ಇದರ ನಂದಾದೀಪಕ್ಕಾಗಿ ಮೋಕೆಯ ಬಸಟ್ಟಿ, ತಿಪ್ಪಸೆಟ್ಟಿ, ಮಾಸಗೆಯ ಗುರುವಾಪ್ಪ, ಮೊದಿನ ಲಿಂಗಿಸೆಟ್ಟೆ, ಜಂದಿಯ ಲಿಂಗಿಸೆಟ್ಟ ಮೊದಲಾದ ವರ್ತಕರು ದಾನವಾಗಿ ಹೇರಿಗೆ ಕಾಸು ಬಿಟ್ಟುರು ಎಂಬ ವಿಷಯವನ್ನು ಉಲ್ಲೇಖಿಸುತ್ತದೆ.

ಮಗಿಮಾವಿನಹಳ್ಳಿ ಗ್ರಾಮದ ಕ್ರಿ.ಶ. ೧೫೪೪ ಒಂದು ಶಾಸನ ವಿಜಯನಗರ ದೊರೆ ಬಯಕಾರ ರಾಮಪ್ಪ ತಮ್ಮ ಮಗಳು ಲಿಖಿರಸಮ್ಮನಿಗೆ ಪುಣ್ಯವಾಗಲಿಯಂದೆ ಚಿಕ್ಕಲಕ ಸಮುದ್ರದ ಕೆರೆಯನ್ನು ಕಟ್ಟಿಸಿದ ವಿರವಿದೆ. ಇದೇ ಶಾಸನ ಅಳಿಯ ರಾಮರಾಜಯ್ಯನ ತನ್ನ ಮಗಳು ತಿರುಮಲಮ್ಮನಿಗೆ ಪುಣ್ಯವಾಗಬೇಕೆಂದು ಚಿಕ್ಕತಿಮ್ಮಪುರ ಅಗ್ರಹಾರವನ್ನು ನಿರ್ಮಿಸಿದ್ದಾನೆಂದು ತಿಳಿಸುತ್ತದೆ. ಈ ಶಾಸನ ತಿಳಿದುಬರುತ್ತವೆ. ಛತ್ರದಹಳ್ಳಿ ಗ್ರಾಮ ವಿಜಯನಗರಕ್ಕೆ ಕ್ರಿ. ಶ. ೧೫೫೯ ಸದಾಶಿವದೇವರಾಯನ ಆಳುತ್ತಿದ್ದಾಗ ಮಾಲ್ಯವಂತ ರಘನಾಥದೇವರ ಉಪ್ಪನ್ನೂ, ಕಮ್ಮಾರರು ಕಬ್ಬಿಣದ ಬಾನೆಯನ್ನು ಯೀಳಿಗರು ಈಚಲ ಮರವನ್ನೂ ಬಿಟ್ಟುಕೊಟ್ಟರೆಂದು ಶಾಸನ ಉಲ್ಲೇಖಿಸುತ್ತದೆ.

## ಪಾಳೇಯಗಾರರು

ವಿಜಯನಗರ ಸಾಮ್ರಾಜ್ಯ ತುಂಬಾ ವಿಸ್ತಾರವಾಗಿದ್ದರಿಂದ ಎಲ್ಲಾ ಭಾಗಗಳ ಮೇಲೆ ತಾವೇ ನೇರವಾಗಿ ಆಳ್ವಿಕೆ ನಡೆಸುವುದು ಕಷ್ಟದಾಯಕವಾಗಿತ್ತು. ಹೀಗಾಗಿ ಆಡಳಿತ ಉಸ್ತುವಾರಿ ನೋಡಿಕೊಳ್ಳಲು, ಕಂದಾಯ ವಸೂಲಿ ಮಾಡಲು ಮತ್ತು ಶಾಂತಿ ಸುವ್ಯವಸ್ಥೆಗಳನ್ನು ನೋಡಿಕೊಳ್ಳಲು ಯುದ್ಧ ಸಂದರ್ಭದಲ್ಲಿ ಸಹಾಯ ಮಾಡುವುದು. ಮೊದಲಾದ ಉದ್ದೇಶಗಳಿಗಾಗಿ ಬಲಿಷ್ಠ ಹಾಗೂ ಅತೀ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಇಂಥಾ ಅಧೀನರಾದ ಸಾಮಾಂತರು, ಸೈನಿಕರು, ದಂಡನಾಯಕರು, ನಾಯಕರು ವಿಜಯನಗರದ ಅವನತಿ ನಂತರ ಸ್ವತಂತ್ರ ವಾಗಿ ಆಳ್ವಿಕೆ ನಡೆಸಿ ಪಾಳೆಯಗಾರರನಿಸಿಕೊಂಡರು. ವಿಜಯನಗರ ಸಾಮ್ರಾಜ್ಯದ ಪತನದ ತರುವಾಯ ರಾಜ್ಯಾಡಳಿತದಲ್ಲಿ ಒಂದು ಖ್ಯಾತಿ ಪಡೆದವರು ಪಾಳೆಯಗಾರರು, ಮುಖ್ಯವಾಗಿ ಚಿತ್ರದುರ್ಗ, ಹರಪನಹಳ್ಳಿ, ಸಂತೇಬೆನ್ನೂರು, ರಾಯದುರ್ಗ, ಗುಡೇಕೋಟೆ, ಜರಿಮಲೆ, ಬಸವಾಪಟ್ಟಣ, ನಾಯಕನಹಟ್ಟಿ, ಮತ್ತೋಡು, ತರೀಕೆರೆ ಪಾಳೆಗಾರರನ್ನು ಹೆಸರಿಸಬಹುದು. ಹೀಗೆ ೭೭ ಪಾಳೆಯಪಟ್ಟುಗಳು, ೯೯ ಸಂಸ್ಥಾನಗಳು ಬೇಡನಾಯಕರ ಅಧೀನದಲ್ಲಿದ್ದವು ಎಂದು ಹೇಳಲಾಗುತ್ತದೆ.[೨೧] ಪ್ರಸ್ತುತ ಅಧ್ಯಯನ ಈ ಪಾಳೆಗಾರರಲ್ಲೊ ಪ್ರಭಾವ ಬಿರುವುದನ್ನು ಗುರುತಿಸಬಹುದು.

## ಹರಪನಹಳ್ಳಿ ಪಾಳೆಯಗಾರರು

ಕೃಷ್ಣನದಿ ತೀರದಲ್ಲಿ ರಕ್ಕಸ ತಂಗಡಿ ಗ್ರಾಮ ಬಳಿ ಘನಘೋರ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಬಹುಮನಿ ಸುಲ್ತಾನರು ಸಂಪೂರ್ಣವಾಗಿ ವಿಜಯವನ್ನು ಸಾಧಿಸಿದರು. ಜೊತೆಗೆ ವಿಜಯನಗರ ಸಂಪತ್ತನ್ನು ಲೂಟಿ ಮಾಡಿ ಅಲ್ಲಿನ ದೇವಾಲಯ, ಗುಡಿ ಗೋಪುರ, ಶಿಲ್ಪಕಲೆಗಳನ್ನು ನಾಶಮಾಡಿದರು. ಇಂತಹ ಸ್ಥಿತಿಯಲ್ಲಿ ಸ್ವತಂತ್ರಗೊಂಡ ಪಾಳೆಪಟ್ಟುಗಳಲ್ಲಿ ಹರಪನಳ್ಳಿ ಪಾಳೆಗಾರರು ಒಬ್ಬರಾಗಿದ್ದರು.

ಬಾಗಳಿ, ನೀಲಗುಂದ, ಖಾನಹಳ್ಳಿ ಮುಂತಾದ ಕಡೆ ಕಳ್ಳರ ಕಾಟ ಹೆಚ್ಚಾಗಿತ್ತು.ಊರ ಗೌಡನಿಗೆ ವಯಸ್ಸಾಗಿದ್ದರಿಂದ ಕಳ್ಳರನ್ನು ದಂಡಿಸಲಾಗದೇ ಚಿಂತಾಕ್ರಾಂತನಾಗಿದ್ದನು.ಕಾಸಿಹಳ್ಳಿ ಅರಣ್ಯದಿಂದ ದಾದಯ್ಯ ತನ್ನ ಕಿರಾತಕ ಜೊತೆಗಾರರೊಂದಿಗೆ ಬಾಗಳಿಗೆ ಬಂದಾಗ ಊರ ಗೌಡ ದಾದಯ್ಯನನ್ನು ಸತ್ಕರಿಸಿ ಒಂದು ಕತ್ತಿ ಕೊಟ್ಟು ಆರ್ಶೀವಾದಿಸಿ "ನನಗೆ ಮಕ್ಕಳಿಲ್ಲ ನೀನು ಕಳ್ಳರ ಹಾವಳಿ ನಿಲ್ಲಸು, ನಿನಗೆ ಗೌಡಿಕೆ ಕೊಡುತ್ತೇನೆ" ಎಂಬ ಹರಿಸಿದ್ದನು.ಒಂದು ದಿನ ದಾದಯ್ಯ ಅವನ ಸಂಘಟಕರೊಂದಿಗೆ ಬೇಟೆ ಆಡುತ್ತಾ ಒಂದು ಕಡೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದನು. ಅದೇ ಮಾರ್ಗದಲ್ಲಿ ನೀಲಗುಂದದ ಸೋಮನಗೌಡರು,

ಹರಪನಹಳ್ಳಿಯ ಇದೇ ಮರದ ಬಳಿ ವಿಶ್ರಾಂತಿಗೆ ಕುಳಿತರು. ಆಗ ದಾದಯ್ಯನ ಬಳಿ ಒಂದು ಸರ್ಪವನ್ನು ಕಂಡು ಜೋಯಿಸರು, ಎಲ್ಲರೊಂದಿಗೆ ನೀಲಗುಂದದ ಸೋಮನಗೌಡರ ಮನೆಗೆ ಒಂದು ಕವೆಡೆ ಬಿಟ್ಟು ಜ್ಯೋತಿಷ್ಯ ನೀನು ಈ ಪ್ರದೇಶದ ಅರಸನಾಗುತ್ತೀಯೇ ಎಂದು ದಾದಯ್ಯನಿಗೆ ಭವಿಷ್ಯ ನುಡಿದನು.ಮುಂದುವರೆಸುತ್ತ ನೀನು ರಾಜನಾದರೆ ಭವಿಷ್ಯ ಹೇಳಿದ ನನಗೆ ಬಾಗಳಿ ಸೇರಿ ೩೩ ಗ್ರಾಮಗಳಲ್ಲಿ ಬಂದು ಗ್ರಾಮವನ್ನು ಹೋಬಲಿ ಹಾಕಿ ಕೂಡಬೇಕೆಂದು ಕೇಳಿದರು.ಆಗ ಇದಕ್ಕೆ ದಾದಯ್ಯ ಒಪ್ಪಿಕೊಳ್ಳುತ್ತಾನೆ. ಈ ಜ್ಯೋತಿಷ್ಯದಿಂದ ಸಂತುಷ್ಯನಾದ ದಾದಯ್ಯ, ಹಣ, ದವಸ ಧಾನ್ಯಗಳು ಇತ್ಯಾದಿಗಳನ್ನು ಸಂಗ್ರಹಿಸುತ್ತಾ ಆಂಜನೇಯ ಸ್ಮರಣಿಯ ಮೂಲಕ ದೇವಾಲಯದ ಬಳಿಕಾಡು ಕಡಿದು ತನ್ನ ಕಿರಾತ ಪಡೆಯ ವಾಸಕ್ಕೆ ದೊಡ್ಡಸ್ಥಳವನ್ನು ಮಾಡಿಕೊಂಡನು. ಒಮ್ಮೆ ಚಿತ್ರದುರ್ಗದ ಪಾಳೇಗಾರರ ಮತ್ತು ತಿಮ್ಮಣ್ಣನಾಯಕನಿಗೆ ಯುದ್ಧ[೨೨] ಸಹಾಯ ಮಾಡಿದ್ದರಿಂದ ಅವನು ದಾದಯ್ಯನಿಗೆ ತನ್ನ ಮಗಳು ಹೊನ್ನವ್ವ ನಾಗಲೇಯನ್ನು ಕೊಟ್ಟು ಮದುವೆ ಮಾಡಿದನು. ತನ್ನ ಅಳಿಯನಿಗೆ ಉಡುಗೂರೆ ಎಂದು ಉಚ್ಚಂಗಿ ದುರ್ಗದ ಕೋಟೆಯನ್ನು ಬಳುವಳಿಯಾಗಿ ಕೊಟ್ಟನು. ಆಗ ದಾದಯ್ಯ ಪತ್ನಿ ಹೋನ್ನವ್ವಳೊಂದಿಗೆ ಉಚ್ಚಂಗಿದುರ್ಗದಲ್ಲಿ, ನೆಲೆಸಿ ಸುತ್ತಮುತ್ತಲಿನ ಗ್ರಾಮಗಳನ್ನು ವಶಪಡಿಸಿಕೊಳ್ಳಲು ಪ್ರಾರಂಭಿಸಿದನು. ಈ ಸಂದರ್ಭದಲ್ಲಿ ಬೈಕಾರಪ್ಪನು ಅಚ್ಯುತರಾಯನ ಆಸ್ಥಾನದಲ್ಲಿ ಅಮಾತ್ಯವಗಿ ಕೆಲಸ ಮಾಡಿ ನಿವೃತ್ತಿಯಿಂದ ಅಪಾರ ಐಶ್ವರ್ಯದೊಂದಿಗೆ ತಿಮ್ಮಲಾಪುರದಲ್ಲಿ ನೆಲೆಸಿದ್ದನು. ಆಗ ಕಳ್ಳರು ಅವನ ಆಸ್ತಿಯನ್ನು ಕೊಳ್ಳೆ ಹೊಡೆದು, ಆನೆ, ಕುದುರೆಗಳೊಂದಿಗೆ ಶ್ರೀರಂಗ ಪಟ್ಟಣದ ಕಡೆ ಹೋರಟ್ಟಿದ್ದ ಸಂದರ್ಭದಲ್ಲಿ ದಾರಿ ತಪ್ಪಿ ನೀಲಗುಂದ ಅಡವಿಗೆ ಒಂದು ಆನೆ, ಒಂಟೆಗಳಲ್ಲಿ ತುಂಬಿದ್ದ ಸಂಪತ್ತನ್ನೆಲ್ಲಾ ವಶಪಡಿಸಿಕೊಂಡನು.ಈ ಹಣದಿಂದ ಹರಪನಹಳ್ಳಿಯಲ್ಲಿ ಎರಡು ಸುತ್ತು ಕೋಟೆ ಕಟ್ಟಿಸಿ, ಒಳಸುತ್ತಿಗೆ ಪತ್ನಿ ಹೊನ್ನವ್ವಳ ಹೆಸರನ್ನು ಮತ್ತು ತನ್ನ ಮನೆ ದೇವರಾದ ಸಂಜೀವರಾಯನ ಹೆಸರಿಟ್ಟನು.ಕೆಲ ದಿನಗಳ ಮೇಲೆ ಚಿತ್ರದುರ್ಗದ ಪಾಳೆಯಗಾರ ಓಬಣ್ಣ ನಾಯಕ ಮತ್ತು ಇವನಿಗೂ ವೈಮನಸ್ಸು ಬಂದಾಗ ಹೊನ್ನವ್ವ ನಾಗತಿಕೋಟೆ ಮೇಲಿನಿಂದ ಬಿದ್ದು ಮರಣ ಹೊಂದುತ್ತಾಳೆ, ನಂತರ ದಾದಯ್ಯನು ಜರಿಮಲೆ ಪಾಳೆಯಗಾರರ ಮಗಳು ಜಂಪವ್ವ ನಾಗಲಿಯನ್ನು ಗುಡೇಕೋಟೆ ಪಾಳೆಯಗಾರರ ಪುತ್ರಿ ಭರ್ಮವ್ವ ನಾಗತಿಯನ್ನು, ತರಕೇರಿ ಪಾಳೆಯಗಾರರ ಮಗಳು ಹನುಮವ್ವ ನಾಗತಿಯನ್ನು ವಿವಾಹವಾಗುತ್ತಾನೆ. ಹೀಗೆ ಸುಖವಾಗಿರುವಾಗಲೇ ದಾದಯ್ಯ ನಾಯಕ ಕ್ರಿ. ಶ. ೧೫೫೮ರಲ್ಲಿ ಹೋಗಿ ಹೋಯ್ಯನಹಳ್ಳಿ ಹರಪನಹಳ್ಳಿ ಪಾಳೇಯಪಟ್ಟನ್ನು ಸ್ಥಾಪಿಸಿದನು. ಕ್ರಿ. ಶ. ೧೫೬೫ರಲ್ಲಿ ಶಾಸ್ತ್ರೋತಕವಾಗಿ ಹರಪನಹಳ್ಳಿ ಕೋಟೆಯಲ್ಲಿ ಸಿಂಹಾಸನವನ್ನು ಏರಿ ಪಟ್ಟಾಭೀಷೇಕ ಮಾಡಿಸಿಕೊಂಡ ಹರಪನಹಳ್ಳಿ ಪಾಳೆಯಪಟ್ಟಿಗೆ ಪ್ರಥಮ ಪಾಳೆಗಾರನಾದನು, ತಾನು ರಾಜನಾದ ಮೇಲೆ ಕಾಮಭಟ್ಟರಿಗೆ ಕೊಟ್ಟ ಮಾತಿನಂತೆ ಹಳ್ಳಿಯೊಂದನ್ನು ಉಂಬಳಿ ಹಾಕಿ ಕೊಟ್ಟನು.

ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿ ಗ್ರಾಮದಲ್ಲಿ ಕ್ರಿ. ಶ. ೧೫ನೇ ಶತಮಾನದ ಪಾಳೆಯಗಾರರ ಕಾಲದ ಶಾಸನದೊರೆತಿದೆ. ಈ ಶಾಸನವು ಹಂಕನಗೌಡ ಮಗ ನಾಗಪ್ಪನನ್ನು ಉಲ್ಲೇಖಿಸಲಾಗುತ್ತದೆ.

**ದಾದಯ್ಯನಾಯಕನ ಮೂಲ**

ಮಾಚಿನಾಯಕ ಅಥವಾ ಮುದ್ದನಾಯಕ ಎನ್ನುವವನಿಗೆ ೪ ಜನ ಮಕ್ಕಳು ಅವರೇ ದಾದೇನಾಯಕ, ರಂಗನಾಯಕ, ತಮ್ಮಯ್ಯನಾಯಕ, ಓಬಣ್ಣನಾಯಕ, ಹಿರಿಯವನ್ನು ದಾದೇನಾಯಕ ಇದರ ಕುಟುಂಬ ಹೊಂಗಲ ತಾಲ್ಲೂಕು ತುಂಬರಗುದ್ದಿ ಗ್ರಾಮದ ಮಯದೇಗೋಡಲ ಪೂವಲ್ಲಿ ವಂಶದ ಬೇಡ ಜನಾಂಗದವರು. ದಾದಯ್ಯನ ಸಹೋದರ ತಮ್ಮನಾಯಕನು ಮೊದಲು "ಬೆನವಳ್ಳಿ" ಎಂಬ ಹೆಸರಿನ ಪ್ರದೇಶವನ್ನು ಆಳುತ್ತಿದ್ದನು. ಆ ನಂತರ "ಸಂಡೂರು" ಎಂಬ ಹೆಸರಾದ ರಾಜ್ಯವನ್ನು ಸ್ಥಾಪಿಸದನೆಂದು ತಿಳಿದು ಬರುತ್ತದೆ.

ದಾದಯ್ಯನಾಯಕ ಅತ್ಯಂತ ಧೈರ್ಯಶಾಲಿ, ಶೂರ, ಧೀರ, ಉದಾರಿ ರೂಪವಂತನಾಗಿದ್ದು ಎಂದೆಲ್ಲ ತಿಳಿದುಬರುತ್ತದೆ. ಇವನು ಪಟ್ಟದ ಅಧಿಕಾರವಿಲ್ಲದೇ ೧೦ ವರ್ಷ, ಪಟ್ಟಾಭೀಷಕ್ತನಾದ ಮೇಲೆ ಇಪ್ಪತ್ತಾರು ವರ್ಷ ಒಟ್ಟು ಮೂವತ್ತಾರು ವರ್ಷ ಹರಪನಹಳ್ಳಿ ಪಾಳೇಯ ಪಟ್ಟವನ್ನು ಆಳಿದ್ದಾನೆ. ಕೋಗಳಿ, ಬಾಗಳಿ, ನೀಲಗುಂದದ ಪಾಳೆಗಾರರ ಸಹಾಯದಿಂದ ರಾಜ್ಯವನ್ನು ವಿಸ್ತರಿಸಿ ನಾಲ್ಕನೂರು ಹಳ್ಳಿಗಳನ್ನು ಆಳುತ್ತಾ, ಎಂಟು ಲಕ್ಷ ವಾರ್ಷಿಕ ಆದಾಯ ಮಾಡಿಕೊಂಡು ಪ್ರಬಲ ಪಾಳೆಯಗಾರ ಎನಿಸಿದ್ದನು. ಈತನು ತನ್ನ ಅಧಿಕಾರದ ಆಡಳಿವನ್ನು ಹರಪನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ ಗ್ರಾಮಕ್ಕೂ ವಿಸ್ತರಿಸಿದ್ದನು. ಇವನ ನಂತರ ಪಾಳೆಯಗಾರರು ಆಳ್ವಿಕೆ ಮಾಡಿದ ಪ್ರಭಾವವನ್ನು ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಗುರುತಿಸಬಹುದು.

**ರಂಗನಾಯಕ**

ದಾದಯ್ಯ ಜಂಪವ್ವ ನಾಗತಿಯವರ ಪುತ್ರನಾದ ಇವನು ಕ್ರಿ. ಶ. ೧೫೮೪ರಲ್ಲಿ ಪಟ್ಟಕ್ಕೆ ಬಂದನು. ಇವನು ತಂದೆಯೊಂದಿಗೆ ಹಲವು ಯುದ್ಧಗಳಲ್ಲಿ ಭಾಗವಹಿಸಿ ಸಾಕಷ್ಟು ಅನುಭವಿಯಾಗಿ ಕೊಟ್ಟೂರಿನವರೆಗೂ ರಾಜ್ಯ ವಿಸ್ತರಿಸಿದ್ದನು. ಇವನ ಕಾಲದಲ್ಲಿ ಹಲವು ಕೆರೆಕಟ್ಟೆ, ದೇವಾಲಯಗಳು ನಿರ್ಮಾತಗೊಂಡವು. ಇವನು ಜರಿಮಲೆ ಪಾಳೆಯಗಾರರ ಕುಲದ ಜಂಪವ್ವ ನಾಗತಿಯನ್ನು ವಿವಾಹವಾಗಿದ್ದನು. ಈತ ಕೊಟ್ಟೂರೇಶ್ವರನಲ್ಲಿ ಭಕ್ತಿಯುಳ್ಳವನಾಗಿದ್ದರಿಂದ ಈ ದೇವಾಲಯದ ಮಧ್ಯ ಭಾಗದಲ್ಲಿ ಮಹಾದ್ವಾರವನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ದಾದಯ್ಯನಾಯಕ ಮತ್ತು ರಂಗನಾಯಕ,

ಇವರಿಬ್ಬರ ಕಲ್ಲಿನ ವಿಗ್ರಹಗಳನ್ನು ದೇವರ ತಿಮ್ಮಲಾಪುರದ ಶ್ರೀ ವೆಂಕಟರಮಣ ದೇವಾಲಯದ ಎದುರು ಪ್ರತಿಷ್ಠಾಸಿದ್ದಾರೆ. ರಂಗನಾಯಕನು ಒಟ್ಟು ೨೪ವರ್ಷ ಆಳ್ವಿಕೆ ಮಾಡಿಕೊಂಡಿದ್ದನು ಈ ಪ್ರಭಾವವನ್ನು ತಂಬ್ರಹಳ್ಳಿ ಪರಿಸರಕ್ಕೂ ವಿಸ್ತೃತ ಎಂಬುದನ್ನು ಪರೋಕ್ಷವಾಗಿ ಗಮನ ಹರಿಸಬಹುದು.

**ಭರ್ಮಣ್ಣ ನಾಯಕ**

ಇವನು ರಂಗಣ್ಣ ನಾಯಕನ ಪುತ್ರ ಕ್ರಿ. ಶ. ೧೬೦೮-೧೬೪೦ ರ ಕಾಲಾವದಿವರೆಗೆ. ಹನಸಿಕೋಟೆಗೆ ಮುತ್ತಿಗೆ ಹಾಕಿ ಗೆದ್ದುದಲ್ಲದೆ, ಇದರೊಂದಿಗೆ ಹಲವು ಕೋಟೆಗಳನ್ನು ವಶಪಡಿಸಿಕೊಂಡು ತನ್ನ ರಾಜ್ಯವಿಸ್ತರಿಸಿ ಪ್ರಜೆಗಳನ್ನು ಸುಖವಾಗಿರಿಸಿದನು. ಆಳ್ವಿಕೆ ಮಾಡಿಕೊಂಡಿದ್ದನು ಈ ಪ್ರಭಾವವನ್ನು ತಂಬ್ರಹಳ್ಳಿ ಪರಿಸರಕ್ಕೂ ವಿಸ್ತೃತ ಎಂಬುದನ್ನು ಪರೋಕ್ಷವಾಗಿ ಗಮನ ಹರಿಸಬಹುದು.

**ಓಬಣ್ಣ ನಾಯಕ ಅಥವಾ ಓಬಣ್ಣ ನಾಯಕ**

ಕ್ರಿ. ಶ. ೧೬೫೦ರಿಂದ ಕೆಲವು ವರ್ಷಗಳ ಕಾಲ ಮಾತ್ರ ರಾಜ್ಯವಾಳಿಕೊಂಡು ಸಾಮ್ರಾಜ್ಯವನ್ನು ವಿಸ್ತರಿಸಿದ್ದನು. ಈತನ ಹೆಸರಿನಲ್ಲಿ ಹರಪನಹಳ್ಳಿ ತಾಲ್ಲೂಕಿನಲ್ಲಿ ಈ ಪ್ರದೇಶದಲ್ಲಿ ಮೇಲೆ ದಾಳಿ ಸಲ್ಲಿಸಿರುವ ಪಾಳೆಗಾರರನ್ನು ಆಕ್ರಮಿಸಿಕೊಂಡಿರುವುದನ್ನು ಅಧ್ಯಯನಗಳಲ್ಲಿ ತಿಳಿದು ಬರುತ್ತದೆ. ಗ್ರಾಮಗಳಿವೆ. ಈತನು ತನ್ನ ಆಡಳಿತದ ಸಂದರ್ಭದಲ್ಲಿ ಕೆಲವು.

**ವೀರಮುಮ್ಮಡಿ ನಾಯಕ ಅಥವಾ ಬಸವಂತನಾಯಕ**

ಹೊಂಬಣ್ಣನಿಗೆ ಸಂತಾನವಿಲ್ಲದಿದ್ದರಿಂದ ತನ್ನ ಕಿರಿಯ ಸಹೋದರ ಮುಮ್ಮಡಿನಾಯಕನಿಗೆ ಪಟ್ಟಾಭಿಷೇಕವಾಯಿತು. ಬಸವಂತನಾಯಕನು ಕಟ್ಟಾಳಾಗಿದ್ದು, ಶಿಸ್ತುಬದ್ದ ಸಮರ್ಥ ಯೋಧರ ಪಡೆ ಇವನ ಸೇನೆಯಲ್ಲಿತ್ತು. ಈತ ಯುದ್ಧಕ್ಕಾಗಿ ಮೈಸೂರಿನಿಂದ ಒಳ್ಳೆಯ ಯುದ್ಧ ಕುದುರೆಗಳನ್ನು ತರಿಸುತ್ತಿದ್ದನು.

ಕೂಡ್ಲಿಗಿ ತಾಲ್ಲೂಕಿನ ಬೆಳ್ಳಾಡು ಕೋಟೆಗೆ ಮುತ್ತಿಗೆ ಹಾಕಿ, ಕೋಟೆಯನ್ನು ಸಂಪೂರ್ಣವಾಗಿ ನಾಶಪಡಿಸಿದನು. ಕೋಟೆ ನಾಶವಾದ ಪ್ರದೇಶಕ್ಕೆ "ರಕ್ತದ ಗುಂಡಿ" ಎಂದು ಹೆಸರಿಡಲಾಗಿದೆ. ಇವನು ೧೨ ವರ್ಷ ತಂಬ್ರಹಳ್ಳಿ ಪರಿಸರವನ್ನು ಒಳಗೊಂಡಂತೆ ಆಳ್ವಿಕೆ ಮಾಡಿದನು.

**ಮುಮ್ಮಡಿ ನಾಯಕ**

ಕ್ರಿ. ಶ. ೧೬೫೭ರಲ್ಲಿ ಪಟ್ಟಕ್ಕೆ ಬಂದು ೧೬೮೭ರ ವರಗೆ ರಾಜ್ಯವಾಳಿದನು. ಇವನ ಮೊದಲ ಹೆಸರು ಚಿಕ್ಕಪ್ಪ, ರಾಜ ಮುಮ್ಮಡಿನಾಯಕ ೪೬೦ (ನಾಲ್ಕುನೂರು ಆರವತ್ತು) ಕಂದಾಯ ಹಳ್ಳಿಗಳನ್ನು ಹೊಂದಿದ್ದನು. ಅವು ೮ ಲಕ್ಷ ವರಹಗಳ ಆದಾಯ ತರುವ ಗ್ರಾಮಗಳಿದ್ದವು. ಸಮರ್ಥ ಆಡಳಿತಗಾರನಾಗಿ ಇವನು ಹರಪನಹಳ್ಳಿಗೆ ಪಶ್ಚಿಮದಲ್ಲಿರುವ ಹೀರೆ ಕುರುವತ್ತಿಗೆ ಹಾಗೂ ಮೈಲಾರ ಪೂರ್ವದ ನಾರಾಯಣದೇವರ ಕೆರೆಯವರೆಗೆ ತನ್ನ ರಾಜ್ಯವನ್ನು ವಿಸರಿಸಿದನು.

**ಮೊದಲ ಬಸವಂತನಾಯಕ**

ಈತನು ಕ್ರಿ. ಶ. ೧೬೮೭-೧೭೦೫ರ ವರೆಗೆ ದಕ್ಷತೆಯಿಂದ ರಾಜ್ಯವಾಳಿದನು. ಅಲ್ಲದೆ ವೀರಶೈವ ದೀಕ್ಷೆಯನ್ನು ಪಡೆದು ಕೊಟ್ರಪ್ಪನಾಯಕನೆಂದು ಪ್ರಸಿದ್ದನಾಗಿದ್ದನು. ಈ ಅರಸ ಶಿವಸಂಗಪ್ಪಯ್ಯನಿಗೆ ಉಜ್ಜಯಿನಿಯಲ್ಲಿ ಹಂಚಿನ ಮಠ ಎಂಬ ಹೆಸರಿನ ಮಠವೊಂದನ್ನು ಕಟ್ಟಿಸಿದನು. ಹರಪನಹಳ್ಳಿ ಅರಸರು ಕೊಟ್ಟೂರು ಬಸವೇಶ್ವರ ಸ್ವಾಮಿಗಳು ಮಹಾಭಕ್ತರಾಗಿದ್ದರು. ಬಾಗಳಿಯ ಗೌಡರ ಮನೆಯ ಹೆಣ್ಣುಗಳನ್ನು ಮದುವೆಯಾಗಬೇಕೆಂದು ಇವನ ಬಯಸಿದ್ದನು. ಆದರೆ ಗೌಡರು ಇವನನ್ನು ಮನೆಗೆ ಊಟಕ್ಕೆ ಕರೆದು ಹಗೇವಿನಲ್ಲಿ ಹಾಕಿ ಮುಚ್ಚಿ ಸಾಯಿಸಿದರೆಂದು ತಿಳಿದುಬರುತ್ತದೆ. ಇವನು ದಾದಯ್ಯ ನಾಯಕನ ಕೊನೆಯ ಸಂತಿಯವನಾಗಿದ್ದನು.

**ಮರಿಕೊಟ್ರಪ್ಪನಾಯಕ**

ಕ್ರಿ. ಶ. ೧೭೦೫-೧೭೧೫ರ ವರೆಗೆ ಇವನು ರಾಜ್ಯವಾಳಿದನು, ಹೊಸಪೇಟೆ ತಾಲ್ಲೂಕಿನ ಹೂಸೂರು ಗ್ರಾಮದವರಿಗೂ ತನ್ನ ರಾಜ್ಯವನ್ನು ವಿಸ್ತರಿಸಿದನು. ಪಶ್ಚಿಮದಲ್ಲಿ ತುಂಗಭದ್ರ ನದಿಯ ಎರಡು ಕಡೆ ರಾಜ್ಯ ವಿಸ್ತರಿಸಿ ಜೊತೆಗೆ ಪುಂಡರನ್ನು ಸೆದೆಬಡಿದು ಪ್ರಜೆಗಳಿಗೆ ನೆಮ್ಮದಿಯನ್ನು ಉಂಟು ಮಾಡಿದನು. ಈತನು ಹೂವಿನಹಡಗಲಿ ರಸ್ತೆಯಲ್ಲಿರುವ ಬಸಾಪುರದ ದಾನವ್ವ ಅಥವಾ ಧರ್ಮವ್ವ ನಾಗತಿಯನ್ನು ವಿವಾಹವಾಗಿದ್ದನು. ಈ ಪ್ರದೇಶದಲ್ಲಿ ತಂಬ್ರಳ್ಳಿ ಪರಿಸರದಲ್ಲಿ ಆಳ್ವಿಕೆ ಮಾಡಿದನೆಂದು ತಿಳಿದು ಬರುತ್ತದೆ.

**ಎರಡನೆಯ ಬಸವಂತನಾಯಕ**

ಇವನು ಕ್ರಿ. ಶ. ೧೭೧೫-೧೭೧೬ರ ವರೆಗೆ ಕೆಲವು ಒಂದು ವರ್ಷ ಮಾತ್ರ ಆಳಿದನು. ದಯವಂತನಾಗಿದ್ದ, ಈತ ಪ್ರಯಾಣಿಕರಿಗೆ ಅರೆವಟ್ಟಿಗೆಗಳನ್ನು ಸ್ಥಾಪಿಸಿ ಪ್ರಜೆಗಳ ಪ್ರೀತಿಗೆ ಪಾತ್ರನಾಗಿದ್ದನು.

ಆದರೆ ಇವನ ಅಕಾಲ ಮರಣಕ್ಕೆ ತುತ್ತಾದನು. ಈ ಪ್ರದೇಶದಲ್ಲಿ ತಂಬ್ರಳ್ಳಿ ಪರಿಸರದಲ್ಲಿ ಆಳ್ವಿಕೆ ಮಾಡಿದನೆಂದು ತಿಳಿದು ಬರುತ್ತದೆ.

**ಬಾಗಳಿ ಹರಿಯಮ್ಮಜ್ಜ**

ಈಕೆ ಎರಡನೇ ಬಸವಂತನಾಯಕನ ಪತ್ನಿ ಗಂಡ ಸತ್ತ ಮೇಲೆ ೫ ವರ್ಷಗಳ ಕಾಲ ದಕ್ಷತೆಯಿಂದ ಪ್ರಜಾಹಿತ ಕಾರ್ಯಮಾಡಿ ಕೀರ್ತಿವಂತಳಾಗಿದ್ದಳು. ಇತಿಹಾಸದಲ್ಲಿ ಈಕೆಯ ಆಳ್ವಿಕೆಯ ಕಾಲವನ್ನು ಗಂಡನ ಹೆಸರಿಗೆ ಸೇರಿಸಿರುವುದು ಬಳ್ಳಾರಿ ಜಿಲ್ಲೆ ಗೆಜಿಟಿಯರಿನಿಂದ ತಿಳಿದು ಬರುತ್ತದೆ. ಈಕೆಯ ಹೆಸರಿನಲ್ಲಿ ಉಚ್ಚಂಗಿ ದುರ್ಗಕ್ಕೆ ಹೋಗುವ ಮಾರ್ಗದಲ್ಲಿರುವ ಒಂದು ಹಳ್ಳಿಗೆ ಹರೇನಹಳ್ಳಿ ಅಥವಾ ಹರಿಯಮನಹಳ್ಳಿ ಎಂದು ಹೆಸರಿಡಲಾಗಿದೆ. ಕೂಡ್ಲಿಗಿ ಶೃಂಗೇರಿ ನರಸಿಂಹ ಸ್ವಾಮಿಗಳಿಗೆ (ರಾಣಿ ಬೆನ್ನೂರಿಗೆ ೧೮.ಕಿ. ಮೀ.ದೂರದಲ್ಲಿದೆ) ತುಂಗಭದ್ರ ನದಿ ತೀರದ ಉದ್ಗಟ್ಟಿದಲ್ಲಿ ಈಕೆಯ ಪತಿ ಒಂದು ಮಠವನ್ನು ಕಟ್ಟಿಸುತ್ತಿರುವಾಗ ಮರಣ ಹೊಂದಿದನ್ನು. ಈಕೆ ಆ ಮಠವನ್ನು ಪೂರ್ಣಗೊಳಿಸಿದ್ದಳು. ಆದರೆ ಇದರ ಪ್ರಾರಂಭೋತ್ಸವಕ್ಕೆ ಮುನ್ನವೇ ಮರಣ ಹೊಂದಿದಳು. ತನ್ನ ಘನ ಕಾಯಕಗಳ ಬಗ್ಗೆ ಹಲವು ಶಾಸನಗಳನ್ನು ಹಾರಿಸಿದ್ದಾಳೆ.

**ಮುದಿಬಸಪ್ಪ ನಾಯಕ**

ಮುದಿಬಸಪ್ಪನಾಯಕ ಮರಿಯಮ್ಮಜ್ಜಿಯ ದತ್ತು ಪುತ್ರನಾಗಿದ್ದು ಹೊಂಬಣ್ಣ ಸಂತತಿಯವನು ವಡಚನಾಳು ಗೋಣಿ ಬಸಪ್ಪನಾಯಕ ಕ್ರಿ. ಶ. ೧೭೨೧-೧೭೪೧ರವರೆಗೆ ೨೦ ವರ್ಷ ಆಳಿದ್ದಾನೆ. ಕಂಚೂರು ಗ್ರಾಮದ ದಳವಾಯಿ ಬಸವ ಹೊಳಲು ಗ್ರಾಮದ ಪಶ್ಚಿಮದಲ್ಲಿ ಇದೇ ಗ್ರಾಮದ ಬ್ರಾಹ್ಮಣನಿಗೆ ತೊಂದರೆ ಕೊಡುತ್ತಿದ್ದನು. ಇದರ ಬಗ್ಗೆ ಅರಸರಿಗೆ ದೂರು ಬಂದಾಗ ಹರಪನಹಳ್ಳಿಗೆ ಬರಬೇಕೆಂದು ಆದೇಶ ಕಳಿಸಿದ್ದನು. ಬಸವ ಬಾರದೇ ನಿರ್ಲಕ್ಷ ಮಾಡಿದಾಗ ಮುದಿ ಬಸಪ್ಪನಾಯಕ ಸೇನೆಯೊಂದಿಗೆ ಹೊಳಲು ಕೋಟೆಗೆ ಮುತ್ತಿಗೆ ಹಾಕಿ ಆ ದಳವಾಯಿಯನ್ನು ಕೊಂದು ಹಾಕಿದ. ಈ ಸಂದರ್ಭದಲ್ಲಿ ರಮಣಭಟ್ಟರು ಅರಸನಿಗೆ ಜಯವಾಗಲೆಂದು ಪ್ರಾರ್ಥನೆ ಮಾಡಿದ್ದರಿಂದ ಚೌಟ್ಟರಿಗೆ ಡಣ್ಣಯಕನ ಕೇರಿ, ಪೆಟ್ಟಗಡಿಗೆ ಸೇರಿದ ಬೀಜವರಿ ಗದ್ದೆಯನ್ನು ಉಂಬಳಿಯಾಗಿ ನೀಡಿದ್ದರು. ಕ್ರಿ. ಶ. ೧೭೩೯ರಲ್ಲಿ ಮೈದೂರಿನ ಆದಾಯದ ಕಾಲು ಭಾಗವನ್ನು ಮಹಾಜನಗಳಿಗೆ ಅಲ್ಲದೆ ಹೊಸಪೇಟೆಯ ಹುಲಗಿ ಕೋಟೆಯನ್ನು ೧೦ ದಿನಗಳ ಕಾಲ ಹೋರಾಡಿ ಗೆದ್ದನು.

**ವೀರಬಸಪ್ಪ ನಾಯಕ**

ವೀರಬಸಪ್ಪ ನಾಯಕನು ಕ್ರಿ. ಶ. ೧೭೪೧-೧೭೪೨ರ ವರೆಗೆ ಆಳಿದನು. ಪಟ್ಟವಾದ ವರ್ಷವೇ ಮಾಗಳ ನದಿ ದಂಡೆಯ ಬಿರುದುಹಳ್ಳಿ ಕೋಟೆ ಮೇಲೆ ಯುದ್ಧ ಮಾಡಿ ಗೆದ್ದನು ಆದರೆ ಇವನು ಅಕಾಲ ಮರಣಕ್ಕೆ ತುತ್ತಾದನು. ಚಿತ್ರದುರ್ಗದ ಪಾಳೆಯಗಾರರ ಉಪಟಳವನ್ನು ತಾಳಲಾರದೇ ಇವನು ಕೆಳದಿ ಅರಸರಿಗೆ ಮೊರೆ ಹೋದನು. ಸಂಧಾನ ನಡೆಸಿ ಸೈನ್ಯ ಸಹಾಯ ಪಡೆದು ಚಿತ್ರದುರ್ಗದ ನಾಯಕನ ಉಪಟಳವನ್ನು ಹಿಮ್ಮಟ್ಟಿಸಿದನು.

ಇವನ ಮಗ ಪುಟ್ಟರಸ ಮೈಲಿಬೇನಿಯಿಂದ ೬ ವರ್ಷದವನಿರುವಾಗಲೇ ಮರಣ ಹೊಂದಿದನು. ಇದರಿಂದ ಸಂಡೂರು ಕೆರೆಯ ಬಳಿ ಇವನ ಸಮಾಧಿ ಮಾಡಿಸಿ, ಸಮಾಧಿಯ ಮೇಲೆ ಸಣ್ಣ ಮಠ ಕಟ್ಟಿಸಿದನು. ಅಲ್ಲದೇ ಇದಕ್ಕೆ ಪುಟ್ಟರಸನ ಮಠ ಎಂದು ಹೆಸರಿಡಲಾಯಿತು. ಇದರ ಪಕ್ಕದ ಬಾವಿಯನ್ನು ಕ್ರಿ. ಶ. ೧೬೫೩ರಲ್ಲಿ ಮುಚ್ಚಿಸಿದರು. ಈ ತಂಬ್ರಳ್ಳಿ ಪರಿಸರದಲ್ಲಿ ಆಳ್ವಿಕೆ ಮಾಡಿದನೆಂದು ತಿಳಿದು ಬರುತ್ತದೆ.

**ಸೋಮಶೇಖರ ನಾಯಕ**

ಈತನು ಕ್ರಿ. ಶ. ೧೭೪೨-೧೭೬೬ರ ವರೆಗೆ ಒಟ್ಟು ೨೪ ವರ್ಷ ರಾಜ್ಯವಾಳಿದನು. ಇವನು ದಕ್ಷ ಆಡಳಿತಗಾರ, ದಾನಶೂರ ಶೌರ್ಯ ಸಹಾಸಗಳಿಗೆ ಹೆಸರಾಗಿದ್ದನು. ಇವನ ಕಾಲದಲ್ಲಿ ಹಲವು ಯುದ್ಧಗಳು ನಡೆದವು. ಮರಾಠಿಗರು ಶಿದ್ದೋಜಿಯ ಮಗ ಮುರಾರಿಯು ಚಿತ್ರದುರ್ಗ ಪಾಳೆಯಗಾರರೊಂದಿಗೆ ಬಂದು ಕೋಟೆಯನ್ನು ಮುತ್ತಿಗೆ ಹಾಕಿದರು. ಆದರೆ ಇವನ ಯುದ್ಧ ತಂತ್ರದ ಮುಂದೆ ಮುರಾರಿ ಸೋಲಬೇಕಾಯಿತು. ಮಹಾಪರಾಕ್ರಮಿಯಾದ ಚಿತ್ರದುರ್ಗದ ಪಾಳೆಯಗಾರ ಕೊಟ್ಟೂರಿಗೆ ಬಂದು ಆನೆಯ ಮೇಲೆ ಕುಳಿತು ಹೋಗುವಾಗ ಕೊಟ್ಟೂರೇಶ್ವರ ಪವಾಡದಂತೆ ನಡೆಸುತಿದ್ದನು.

ಸೋಮಶೇಖರ ನಾಯಕ ಚಿತ್ರದುರ್ಗದವರ ಮೇಲೆ ಸೇಡು ತೀರಿಸಿಕೊಳ್ಳಲು ಕಾಯುತ್ತಿರುವಗಲೇ ಉಚ್ಚಂಗಿದುರ್ಗದ ಉತ್ಸವ ಮೂರ್ತಿಯನ್ನು ಚಿತ್ರದುರ್ಗದವರು ಕೊಂಡುಹೋದರು. ರಾಯದುರ್ಗದವರಿಂದ ಚಿತ್ರದುರ್ಗದ ಮೇಲೆ ಯುದ್ಧ ಮಾಡಲು ಕೆರೆಗೆ ಬಂದಾಗ ಮಾಯಕೊಂಡದ ಕದನ ಪ್ರಾರಂಭವಾಯಿತು. ಕ್ರಿ. ಶ. ೧೭೪೮ರಲ್ಲಿ ಚಿತ್ರದುರ್ಗದ ಹಿರೇಮದಕರಿ ನಾಯಕನಿಗೂ ಮತ್ತು ಹರಪನಹಳ್ಳಿ ಸೋಮಶೇಖರ ನಾಯಕನಿಗೂ ಮಾಯಕೊಂಡದ ಮಟ್ಟಿಯಲ್ಲಿ ಘನಘೋರ ಯುದ್ಧ ನಡೆಯಿತು. ಇವರಿಬ್ಬರು ಆನೆಗಳ ಮೇಲೆ ಕುಳಿತು ಮುಖಾಮುಖಿ ಯುದ್ಧ ಮಾಡುತ್ತಾರೆ.

ಹಿರೇ ಮದಕರಿನಾಯಕ ವೀರ ಮರಣ ಹೊಂದುತ್ತಾನೆ. ಮುಂದೆ ಚಿತ್ರದುರ್ಗದ ಪಾಳೆಯಗಾರ ಕಸ್ತೂರಿ ರಂಗಪ್ಪನಾಯಕ ಮತ್ತು ಇಮ್ಮಡಿ ಮದಕರಿನಾಯಕನೊಂದಿಗೆ ಯುದ್ಧ ನಡೆಯುತ್ತದೆ. ಇಮ್ಮಡಿ ಮದಕರಿನಾಯಕ ಕಾಲದಲ್ಲಿ ಅವನು ೪ ತಿಂಗಳು ಯುದ್ಧ ನಡೆಸಿ ಹರಪನಹಳ್ಳಿ ಗಡಿ ಪ್ರದೇಶಗಳನ್ನು ಲೂಟಿ ಮಾಡುತ್ತಾನೆ.

ತೋಳಹಳ್ಳಿ ಬಯಲಿನಲ್ಲಿ ೧೨ ದಿನ ಯುದ್ಧ ನಡೆದು ಉಜ್ಜಯಿನಿ ಕೋಟೆ ತೋಲಹಳ್ಳಿ ಕೋಟೆಗಳು ಸೋಮಶೇಖರ ನಾಯಕನಿಗೆ ದಕ್ಕತ್ತದೆ. ಆದರೆ ಪಾಲಘಟ್ಟಯಲ್ಲಿ ಯುದ್ಧ ನಡೆದರರೂ ಈತನಿಗೆ ಕೋಟೆಯನ್ನು ಗೆಲ್ಲಲಾಗುವುದಿಲ್ಲ . ಆದರೆ ಇವನ ವೀರಸೈನಿಕ ಬಂಚನಾಯಕನು ತನ್ನ ಪ್ರಾಣವನ್ನು ಲೆಕ್ಕಿಸದೇ ಹೋರಾಡಿ ಪಾಲಘಟ್ಟದ ಕೋಟೆಯನ್ನು ಗೆದ್ದುಕೊಡ್ಡನು. ಯುದ್ಧದಲ್ಲಿ ವೀರ ಮರಣ ಹೊಂದಿದ ಈತನಿಗೆ ಹರಪನಹಳ್ಳಿ ಅಯ್ಯನ ಕರೆದಂಡಯಲ್ಲಿನ ಕಾಳಮ್ಮನ ಗುಡಿಯಲ್ಲಿ ವೀರಗಲ್ಲು ನಿಲ್ಲಸಿದ್ದಾರೆ.

ತೂಲಹಳ್ಳಿ ಬಯಲಿನಲ್ಲಿ ಚಿತ್ರದುರ್ಗದ ಪಾಳೆಯಗಾರರ ವಿರುದ್ಧ ನಡೆದ ಎಲ್ಲಾ ಯುದ್ಧಗಳಲ್ಲಿ ಜಯಸಿದ. ಸೋಮಶೇಖರ ನಾಯಕ ಕೆಳದಿ ಅರಸರಿಗೆ ಮಾಯಕೊಂಡದ ಕಾಳಗದ ನಂತರ ಕಪ್ಪಕಾಣಿಕೆಯನ್ನು ಒಪ್ಪಿಸುತ್ತಾನೆ. ಈ ಹಣದಿಂದ ಕೆಳದಿ ಬಸಪ್ಪನಾಯಕ ೧೭೪೯ರಂದು ಕೊಲ್ಲೂರು ಮೂಕಾಂಬಿಕೆಗೆ ಬೆಳ್ಳಿ ತಟ್ಟೆಯನ್ನು ಒಪ್ಪಿಸುತ್ತಾನೆ. ಸೋಮಶೇಖರ ನಾಯಕನಿಗೆ ಜಂಬಣ್ಣ ಎನ್ನುವ ಮಗನಿದ್ದನು. ಈತನನ್ನು ಪುಟ್ಟರಸ ಎನ್ನುತ್ತಿದ್ದರು.

ಈತನಿಗೆ ಚಿಕ್ಕ ವಯಸ್ಸಿನಲ್ಲಿಯೇ ರೇವಕ್ಕನನ್ನು ತಂದು ಮದುವೆ ಮಾಡಿದರು.ಆದರೆ ಪುಟ್ಟರಸ ಮೈಲಿಭೇನೆಯಿಂದ ಮರಣ ಹೊಂದಿದ ಮಗನ ಶ್ಲೋಕದಲ್ಲಿ ಸೋಮಶೇಖರ ನಾಯಕನು ಕ್ರಿ. ಶ. ೧೭೫೮ರಲ್ಲಿ ಮರಣ ಹೊಂದಿದನು. ಕರ್ನಲ್ ಮೆಕೆಂಜಿಯವರ ದಾಖಲೆಯ ಪ್ರಕಾರ ಸೋಮಶೇಖರ ನಾಯಕ ಹೈದ್ರಾಬಾದ್ ನಿಜಾಂನಿಗೆ ೧೨ ಸಾವಿರ ಗುತ್ತಿ ಮುರರಾರರಿಗೆ ೬ ಸಾವಿರ ಪೇಶ್ವಯವರರಿಗೆ ೨-೩ ಲಕ್ಷ ಪಗೋಡಗಳ ರೂಪದಲ್ಲಿ ಕಪ್ಪ ಕೊಡುತ್ತಿದ್ದನೆಂದು ತಿಳಿದುಬರುತ್ತದೆ.

ಸೋಮಶೇಖರ ನಾಯಕನ ಪತ್ನಿ ಸೋಮಜ್ಜಿಯು ಸಂಬಂಧಿಕರ ಅಡವಿ ಬೊಮ್ಮಣ್ಣನನ್ನು ದತ್ತು ತೆಗೆದುಕೊಂಡಳು. ಈಕೆ ಈತನ್ನನ್ನು ಪಟ್ಟಾಭೀಷಕ್ತನಾಗಿಸಿ ಮುಮ್ಮಡಿ ವೀರ ಬಸಪ್ಪನಾಯಕನೆಂದು ಹೆಸರಿಟ್ಟಳು. ಆದರೆ ಇವನು ಅಸಮರ್ಥ ಅರಸನಾಗಿದ್ದರಿಂದ ಸೋಮಜ್ಜಿಯೇ ಆಡಳಿತ ನೋಡಿಕೊಳ್ಳುತ್ತಿದ್ದಳು.

**ಬಸಪ್ಪನಾಯಕ**

ಬಸಪ್ಪನಯಕನು ಕ್ರಿ. ಶ. ೧೭೬೮-೧೭೯೨ರ ವರೆಗೆ ರಾಜ್ಯವಾಳಿದನು. ಇವನು ಬಲು ಶೂರನಾಗಿದ್ದನು. ಬ್ರಾಹ್ಮಣದಲ್ಲಿ, ಗುರು-ಹಿರಿಯರಲ್ಲಿ ಬಹಳ ಭಕ್ತಿ ಇಟ್ಟುಕೊಂಡಿದ್ದನು. ಕ್ರಿ. ಶ. ೧೭೭೨ರಲ್ಲಿ ಕೂಡ್ಲಿಗಿ ಶೃಂಗೇರಿಯ ಮಠದ ಶ್ರೀ ನರಸಿಂಹ ಭಾರತಿಸ್ವಾಮಿಗಳಿಗೆ ಸೋಮಲಾಪುರವೆಂಬ ಗ್ರಾಮವನ್ನು ದಾನ ನೀಡಿದ್ದಾನೆ.

ಒಮ್ಮೆ ಅಪಾರ ಸೇನೆಯೊಂದಿಗೆ ನಾರಾಯಣ ದೇವರಕೆರೆ ಮಾರ್ಗವಾಗಿ ಹೋಗಿ ಕೊಪ್ಪಳ ದುರ್ಗಕ್ಕೆ ಮುತ್ತಿಗೆ ಹಾಕಿದಳು ದಿನಗಳ ಕಾಲ ಯುದ್ದ ಮಾಡಲು ಸಿದ್ದನಾದನು, ಬಸಪ್ಪ ನಾಯಕ ಟಿಪ್ಪು ಸುಲ್ತಾನನಿಂದ ಪ್ರಶಂಶೆ ಪಡೆಯಬೇಕೆಂದು ತಾನೇ ಮನಸ್ಸಿನಲ್ಲಿ ಸುಲ್ತಾನನಿಗೆ ಒಪ್ಪಿಸಿದನು.ಇದರಿಂದ ಟಿಪ್ಪು ತನ್ನ ಮನಸ್ಸಿನಲ್ಲಿ ಇಂತಹ ಶೂರನಾದ ನಾಯಕ ಎಂದಾದರೂ ನನ್ನ ಮೇಲೆ ಯುದ್ಧ ಮಾಡಿದರೆ? ಎಂದು ಯೋಚಿಸಿ ಬಸಪ್ಪನಾಯಕವನ್ನು ಸೆದೆ ಬಡಿಯುವ ಉಪಾಯದಿಂದ ಹಗರಿಬೊಮ್ಮನಹಳ್ಳಿಗೆ ಕರೆಸಿ ಸೆರೆ ಹಿಡಿದನು. ಕ್ರಿ. ಶ. ೧೭೮೭ರಲ್ಲಿ ಮುಂದೆ ಈತನನ್ನು ಕಬ್ಬಳ ದುರ್ಗದ ಸೆರೆಮನೆಗೆ ಕೂಡಿ ಹಾಕಿದನು. ನಂತರ ಈತನ ಮೂವರರು ರಾಣಿಯರೊಂದಿಗೆ ಶ್ರೀರಂಗಪಟ್ಟಣದ ಸೆರೆಮನೆಗೆ ತಳ್ಳಿದರು.

ವೀರನದುರ್ಗದ ಗಡಿಕಾವಲಿನ ರಾಮಯ್ಯ ನಾಯಕ ಐದು ದಿನ ಹಗಲು ರಾತ್ರಿ ಯುದ್ಧ ಮಾಡಿದ್ದರಿಂದ ಟಿಪ್ಪು ಸುಲ್ತಾನನ ವಿರುದ್ಧ ಸೋತು ಹಿಂದಿರುಗಬೇಕಾಯಿತು. ಆತನ ಸೋಲಿನೊಂದಿಗೆ ಹರಪನಹಳ್ಳಿ ಪಾಳೆಯಪಟ್ಟು ಪತನವಾಯಿತು. ಟಿಪ್ಪು ಈತನಿಗೆ ದ್ರೋಹ ಬಗೆದನು.

**ಎರಡನೇ ಸೋಮಶೇಖರ ನಾಯಕ**

ಸೋಮಶೇಖರ ನಾಯಕ ಅನುಭವಿಲ್ಲದ ಹುಡುಗನಾಗಿದ್ದರಿಂದ ಕೆಲವರು, ಅರಮನೆಯ ಸಂಪತ್ತನ್ನು ನೀಲಗುಂದದ ಗೌಡರ ಮನೆಗೆ ಸಾಗಿಸುವ ಪ್ರಯತ್ನ ಮಾಡಿದರು. ಮಂತ್ರಿ ಹಂಪರಸ ಇದನ್ನೆಲ್ಲಾ ತಡೆಯುವ ಪ್ರಯತ್ನ ಮಾಡಿದನು. ಮುಂದೆ ೧೬ ವರ್ಷದ ಎರಡನೇಯ ಸೋಮಶೇಖರ ನಾಯಕ ಬಸಮ್ಮ, ನೀಲಮ್ಮ, ಹಿರೇ ಬಸಮ್ಮ, ಸುಮಮ್ಮ ಎಂಬ ನಾಲ್ವರು ಕನ್ಯೆಯರನ್ನು ವಿವಾಹವಾದನು. ಸ್ವಂತ ಬುದ್ಧಿ ಇಲ್ಲದೇ ಸಂಸ್ಥಾನದ ಹಿರಿಯರನ್ನು ಅಲಕ್ಷ ಮಾಡಿ ರಾಜ್ಯದಲ್ಲಿ ಆಂತರಿಕ ಪರಿಸ್ಥಿತಿ ಬಿಡಾಯಿಸುವಂತೆ ಮಾಡಿದನು.

ಕ್ರಿ. ಶ. ೧೭೯೯ರಲ್ಲಿ ಟಿಪ್ಪು ಸುಲ್ತಾನನು ನಾಲ್ಕನೇ ಮೈಸೂರು ಯುದ್ಧದಲ್ಲಿ ಮರಣ ಹೊಂದಿ ಬ್ರಿಟಿಷ್‌ರ ಆಳ್ವಿಕೆ ಪ್ರಾರಂಭವಾಯಿತು. ಆ ಸಂದರ್ಭದಲ್ಲಿ ಬ್ರಿಟಿಷರು ಹಂಪನಹಳ್ಳಿ ಬಗ್ಗೆ ಯೋಚಿಸಿದರು. ಜನರಲ್ ಹ್ಯಾರಿಸ್ ಮತ್ತು ದಿವಾನ್ ಪೂರ್ಣಯ್ಯರವರು ಹರಿಹರಕ್ಕೆ ಬಂದು ಹಂಪರಸಪ್ಪನವರಿಗೆ

ಅರವತ್ತು ಸಾವಿರ ಜಾಹಗೀರು ಹಣ ಕೊಡುತ್ತೇವೆ. ರಾಜ್ಯವನ್ನು ಸಂಸ್ಥಾನದಲ್ಲಿ ವಿಲೀನಗೊಳಿಸಲು ಕೇಳಿದಾಗ ಹರಪನಹಳ್ಳಿಯ ಅರಸ ಒಪ್ಪಲಿಲ್ಲ. ಇದರಿಂದ ಕೂಪಿತರರಾದ ಬ್ರಿಟಿಷರು ಇಬ್ಬರನ್ನು ಶ್ರೀರಂಗಪಟ್ಟಣದ ಸೆರೆಯಲ್ಲಿಟ್ಟರು ನಂತರ ಬ್ರಿಟಿಷರು ಹರಪನಹಳ್ಳಿ ಕೋಟೆಯನ್ನು ವಶಪಡಿಸಿಕೊಂಡರು.

ತಂಬ್ರಹಳ್ಳಿ ಪ್ರದೇಶದಲ್ಲಿ ಸೋಮಶೇಖರ ನಾಯಕನು ಆಡಳಿತ ಮಾಡಿದ್ದನೆಂದು ತಿಳಿದುಬರುತ್ತದೆ. ಇವನು ಶೂರ, ದಕ್ಷ, ಆಡಳಿತಗಾರನಾಗಿದ್ದರಿಂದ ಅವನ ಸಾಮ್ರಾಜ್ಯವು ತುಂಬಾ ವಿಶಾಲವಾಗಿತ್ತು. ಐತಿಹಾಸಿಕ ಮತ್ತು ಸಾಂಸ್ಕೃತಿಕ ಹಿನ್ನಲೆಯಲ್ಲಿ ದೇವಾಲಯಕ್ಕೆ ಉನ್ನತವಾದ ಕೊಡುಗೆಗಳನ್ನು ಕೊಟ್ಟಿದ್ದನು. ಈತನ ಆಡಳಿತ  ಇವನ ಆಳ್ವಿಕೆ ಕಾಲದಲ್ಲಿ ಹರಪನಹಳ್ಳಿ ಪ್ರಾಂತ್ಯಕ್ಕೆ ಸೇರಿದ ಉಚ್ಚಂಗಿ ದುರ್ಗ ಅರಸಿಕೆರೆ, ತಂಬ್ರಹಳ್ಳಿ, ನಾರಾಯಣದೇವರ ಕೆರೆ ಗ್ರಾಮಗಳು ಸೇರಿದ್ದವು.ಈ ಗ್ರಾಮಗಳಲ್ಲಿ ಕೋಟೆ ಮತ್ತು ಅರಮನೆಯನ್ನು ಕಟ್ಟಿಸಿ ಪ್ರತಿ ಗ್ರಾಮದಲ್ಲಿ ಮಿಲಿಟರಿಯ ಕೆಲವು ಸೈನಿಕರನ್ನು ನಿಯೋಜಿಸಿದ್ದನು.

ಅಲ್ಲದೆ ಅವರ ತನಿಖೆಗಾಗಿ ಒಬ್ಬ ನಾಯಕ (ಮುಖಂಡ) ನೇಮಿಸಿದ್ದನು. ತಾನು ಕೂಡ ಹಾಗಾಗ ಈ ಗ್ರಾಮಗಳಿಗೆ ಭೇಟಿ ಕೊಡುತ್ತಿದ್ದನು. ಅವನ ಅಧೀನದಲ್ಲಿ ಕೆಲವು ಸಣ್ಣ ಸಣ್ಣ ಪಾಳೆಯಗಾರರ ಗುಂಪುಗಳಿದ್ದವು. ಅದರಲ್ಲಿ ಒಂದು ಗುಂಪಿಗೆ ಓಬಳನಾಯಕ ಸುಮಾರು ಆರುನೂರು ವರ್ಷಗಳಿಂದೆ ಪ್ರಮುಖನಾಗಿದ್ದನು. ಈಗಿನ ತಂಬ್ರಹಳ್ಳಿಯ ಈಶಾನ್ಯ ದಿಕ್ಕಿಗೆ ಸುಮಾರು ಒಂದೆರಡು ಮೈಲಿ ದೂರದಲ್ಲಿ ಒಂದು ಬೆಟ್ಟವಿದೆ. ಈ ಬೆಟ್ಟದ ದಕ್ಷಿಣ ದಿಕ್ಕಿಗೆ ಹೊಂದಿಕೊಂಡು ಬಂಡಿಹಳ್ಳಿ ಎಂಬ ಸಣ್ಣ ಊರು ಇತ್ತು. ಆ ಹಳ್ಳಿಗೆ ಓಬಳನಾಯಕನೇ ಪಾಳೆಯಗಾರನಾಗಿದ್ದನು. ಈ ಓಬಳನಾಯಕನು ದಕ್ಷ ಆಡಳಿತಗಾರನಾಗಿದ್ದು, ವಿಶಾಲವಾದ ಸಾಮ್ರಜ್ಯವನ್ನು ಸ್ಥಾಪಿಸಿದ್ದನು. ಈ ಪಾಳೆಗಾರರು ಹಗರಿಬೊಮ್ಮನಹಳ್ಳಿ ತಾಲೂಕಿನ ಬಹುತೇಕ ಗ್ರಾಮಗಳಿಗೆ ಆಡಳಿತ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿದ್ದಾರೆ.

ಒಟ್ಟಾರೆಯಾಗಿ ಹರಪನಹಳ್ಳಿ ಪಾಳೆಯಗಾರರು ತಮ್ಮ ಆಡಳಿತವನ್ನು ಹರಪನಹಳ್ಳಿ ತಾಲ್ಲೂಕು ಮತ್ತು ಸುತ್ತಮುತ್ತಲಿನಲ್ಲಿ ಇರುವ ಗ್ರಾಮಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ಅವರ ಆಳ್ವಿಕೆಗೆ ಒಳಗಾಗಿದ್ದ ಗ್ರಾಮ ಪ್ರದೇಶಗಳ ತಂಬ್ರಹಳ್ಳಿಯೂ ಕೂಡ ಒಳಗೊಂಡಿದ್ದು ಹಲವು ಸಾಂಸ್ಕೃತಿಕ ಕುರುಹುಗಳನ್ನು ಒಳಗೊಂಡಿದೆ.

**ಅಡಿಟಿಪ್ಪಣಿ**

೦೧. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ–೧, ಪ್ರಸಾರಂಗ ಪುಟ ೬

೦೨. ಸುಜಾತ ಅಕ್ಕಿ, ನಮ್ಮೂರ ತಂಬ್ರಹಳ್ಳಿ, ಪುಟ ೩

೦೩. Gazetteer of India Bellary Disstrict P-5-

೦೪. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ–೧, ಪುಟ ೭

೦೫. ಶಿವತಾರಕ ಕೆ.ಬಿ. ಕರ್ನಾಟಕದ ಪುರತತ್ವ ನೆಲೆಗಳು, ಪುಟ ೧೦

೦೬. ಕರ್ನಾಟಕದ ಪರಂಪರೆ ಸಂಪುಟ–೧,ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪುಟ ೧೧೨

೦೭. ಅದೇ ಪುಟ ೧೧೨

೦೮. ದೇವರಕೊಂಡ ರೆಡ್ಡಿ, ಕಲಾವೀರ ಮುನ್ನಾಲ, ಭಟ್ಟಸೂರಿ, ಪರಮಶಿವಮೂರ್ತಿಡಿ.ವಿ.(ಸಂ), ಶಾಸನ ಸಂಪುಟ–೧, ಬಳಾರಿ, ಪುಟ ೮೮.

೦೯. ಸತ್ಯ ಬಿ.ಎನ್. ಬಳ್ಳಾರಿ ಡಿಸ್ಟ್ರಿಕ್ ಗೆಜಿಟಿಯರ್, ೧೯೬೪ ಪುಟ ೫೪.

೧೦. ಸೂರ್ಯನಾಥ ಯು, ಕಾಮತ್, ಕರ್ನಾಟಕ ರಾಜ್ಯ ಗೆಜಿಟಿಯರ್, ಸಂಪುಟ–೨, ಬಳ್ಳಾರಿ, ೧೯೮೪, ಪುಟ ೧೮೦.

೧೧. ಶಿವತಾರಕ ಕೆ.ಬಿ. ಕರ್ನಾಟಕದ ಪುರಾತತ್ವ ನೆಲೆಗಳು ಪುಟ ೧೦

೧೨. ಚನ್ನಬಸಪ್ಪ ಎಸ್, ಪಾಟೀಲ್ ಮತ್ತು ವಿನೋದ ಪಾಟೀಲ್

೧೩. ದುರುಗಪ್ಪ ಎಂ.ಕೆ. ಹಗರಿಬೊಮ್ಮನಹಳ್ಳಿ ತಾಲೂಕು ದಶಮಾಪುರ ಪರಿಸರದ ಪ್ರಾಗ್ಯೆತಿಹಾಸಿಕ ಕುರುಹುಗಳು, ಇತಿಹಾಸ ದರ್ಶನ ಸಂಪುಟ–೧೯,ಪುಟ ೧೬

೧೪. ಮುತ್ತುರಾಜ ಇತಿಹಾಸ ದರ್ಶನ, ಸಂಪುಟ–೧೫, ಪುಟ ೧೬

೧೫. ರಘುನಾಥ ಭಟ್ಟ, ಪುರಾತತ್ವದ ಪರಿಚಯ, ಪುಟ ೩೧

೧೬. ದೇವರಕೊಂಡ ರೆಡ್ಡಿ, ೧೯೯೯, ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಪುಟ ೩೭೪

೧೭. ಮಂಜುನಾಯಕ ಆರ್. ಪೂರ್ವೋಕ್ತ, ಪುಟ ೨೦

೧೮. ವಾಸುದೇವ ಬಡಿಗೇರ, ಪೂರ್ವೋಕ್ತ, ಪುಟ ೬೫

೧೯. ಗಿರಿಜಾ ದಾವಣಗೇರೆ, ಪಿ. ಇದು ನಮ್ಮ ಜಿಲ್ಲೆ, ಪುಟ ೬೬೬

೨೦. ಎ.ಫಿ ಗ್ರಾಫಿಯಾ ಕರ್ನಾಟಕ, ಸಂಪುಟ–೭, ಪುಟ ೬೮

೨೧. ಕರ್ನಾಟಕದ ಪರಂಪರೆ ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ , ಪುಟ ೧೧೧

೨೨. ಅದೇ, ಪುಟ ೧೧೨

೨೩. ಅದೇ, ಪುಟ ೧೧೬

## ಅಧ್ಯಾಯ-೩ ದೇವಾಲಯ ಮತ್ತು ಮೂರ್ತಿಶಿಲ್ಪ

೩.೧ ದೇವಾಲಯಗಳು

೩.೨ ಮೂರ್ತಿಶಿಲ್ಪಗಳು

೩.೩ ಕೋಟೆಗಳು

೩.೪ ಮಂಟಪಗಳು

೩.೫ ಬಾವಿಗಳು

೩.೬ ಸ್ಮಾರಕಗಳು

# ಅಧ್ಯಾಯ ಮೂರು

# ದೇವಾಲಯ ಮತ್ತು ಮೂರ್ತಿಶಿಲ್ಪ

## ೩.೧ ದೇವಾಲಯಗಳು

ಮಾನವ ಅಲೆದಾಡುವ ಪ್ರವೃತ್ತಿಯಿಂದ ಒಂದೆಡೆ ನೆಲೆ ನಿಂತು, ತಾನು ವಾಸಿಸಲು ಯೋಗ್ಯವಾದ ಮನೆಗಳನ್ನು ನಿರ್ಮಿಸಲು ಆರಂಭಿಸಿದನು. ಪ್ರಾಯಶಃ ಅಲ್ಲಿಂದಲೇ ವಾಸ್ತುಶಿಲ್ಪ ಉಗಮಗೊಂಡಿದೆ ಎಂದು ಹೇಳಲಾಗುತ್ತದೆ. ಸಾಮಾನ್ಯವಾಗಿ ವಾಸ್ತು ಎಂದರೆ ಕಟ್ಟಡ ಅಥವಾ ಮನುಷ್ಯ ಹಾಗೂ ದೇವತೆಗಳು ವಾಸ ಮಾಡುವ ಸ್ಥಳ ಎನ್ನುವ ಅರ್ಥವಿದೆ ಅಂದರೆ ದೇವಾಲಯ ಕೋಟೆ ಹಾಗೂ ಮನೆಗಳು ಇತ್ಯಾದಿಗಳೆಲ್ಲವೂ ವಾಸ್ತು ಎಂದು ಪರಿಗಣಿಸಲಾಗುತ್ತದೆ.

ವಾಸ್ತುಶಿಲ್ಪ ಎಂಬ ಪಾರಿಭಾಷೆಗೆ ವಿಶಾಲವಾದ ಅರ್ಥವಿದ್ದರೂ ಸಾಮಾನ್ಯವಾಗಿ ದೇವಾಲಯಗಳನ್ನು ಮಾತ್ರ ವಾಸ್ತುಶಿಲ್ಪಗಳಾಗಿ ಕಾಣುತ್ತೇವೆ. ಗಟ್ಟಿಯಾದ ವಸ್ತುವಿನಿಂದ ವಾಸ್ತುವಿನ (ನಿವೇಶ) ಮೇಲೆ ನಿರ್ಮಾಣಗೊಂಡ ಕಟ್ಟಡವನ್ನು ವಾಸ್ತುರಚನೆ ಎಂದು ಕರೆಯಲಾಗುತ್ತದೆ. ಇಂತಹ ವಾಸ್ತು ರಚನೆಗಳು ಮಾನವನ ನಾಗರಿಕತೆಯ ಮಾನದಂಡ ಎಂದರೆ ತಪ್ಪಗಲಾರದು ಕಾಲಾಂತರದಲ್ಲಿ ಮಾನವನ ಬೌದ್ಧಿಕ ವಿಕಾಸ ಹೊಂದಿರುವುದನ್ನು ತಿಳಿಯಲು ಈ ವಾಸ್ತು ರಚನೆಗಳು ಸಾಕ್ಷಿಯಾಗಿವೆ.[೧]

ಸ್ತೂಪ, ಚೈತ್ಯ, ವಿಹಾರ, ಬಸದಿ, ಮಸೀದಿ, ಚರ್ಚ್, ಕೋಟೆ, ದೇವಾಲಯ ಕೆರೆಕಟ್ಟೆ ಹಾಗೂ ಮನೆಗಳಂತಹ ಎಲ್ಲಾ ರಚನೆಗಳು ವಾಸ್ತುಶಿಲ್ಪಗಳಾಗಿವೆ.[೨] ಶುಕ್ರನ ಗ್ರಂಥದಲ್ಲಿ ದೇವಾಲಯ, ಅರಮನೆ, ಮೂರ್ತಿಶಿಲ್ಪ ಜನರ ಜೀವನೋಪಯೋಗಿ ಗೃಹಗಳು, ಬಾವಿ ಪುಷ್ಕರಣಿ ಮೊದಲಾದ ಸ್ಮಾರಕಗಳನ್ನು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸಲಾಗಿದೆ. ವಾಸ್ತುವಿನ ಜೊತೆ ಜೊತೆಗೆ ಶಿಲ್ಪವು ಶಿಲ್ಪಿಯ ಅಭಿರುಚಿಗೆ ಅನುಗುಣವಾಗಿ ಅವನ ಅಭಿವ್ಯಕ್ತಿಯನ್ನು ಶಿಲ್ಪಗಳಲ್ಲಿ ಕಾಣಬಹುದು, ವಾಸ್ತು ಮತ್ತು ಶಿಲ್ಪಗಳೆರಡೂ ಸೌಂದರ್ಯದ ಪ್ರತೀಕವಾಗಿದ್ದು ಅವು ಆರಂಭದಿಂದಲೂ ಜೊತೆ ಜೊತೆಯಾಗಿ ಬೆಳೆದುಬಂದಿರುವುದನ್ನು ಕಾಣಬಹುದು.

ಮಾನಸಾರ, ಕಶ್ಯಪ, ವೈಖಾಸನ, ವಿಶ್ವಕರ್ಮಿಯ ಇನ್ನೂ ಮೊದಲಾದ ಶಿಲ್ಪಶಾಸ್ತ್ರದ ಗ್ರಂಥಗಳಲ್ಲಿ ದೇವಾಲಯಗಳು ನಿರ್ಮಾಣ ಕುರಿತ ಹಲವು ವಿವರಗಳು ದೊರೆಯುತ್ತವೆ.[೪] ವಿಪರ್ಯಾಸವೆಂದರೆ ಈ ಎಲ್ಲಾ ಗ್ರಂಥಗಳು ಪೂರ್ಣಪ್ರಮಾಣದಲ್ಲಿ ದೊರೆಯದೇ ಇರುವುದರಿಂದ ದೇವಾಲಯದ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಗಳು ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಆದರೆ ಮಾನಸಾರ ಗ್ರಂಥದ ಒಂದು

ಅಧ್ಯಾಯದಲ್ಲಿ ದೇವಾಲಯಗಳ ನಿರ್ಮಾಣದ ಉದ್ದೇಶ, ಶಿಲ್ಪಕ್ಕಿರಬೇಕಾದ ಅರ್ಹತೆಗಳು, ದೇವಾಲಯ ನಿರ್ಮಾಣಕ್ಕಿರುವ ಯೋಗ್ಯ ಸ್ಥಳ, ದೇವಾಲಯಗಳನ್ನು ಯಾವ ದಿಕ್ಕುನಲ್ಲಿ ಕಟ್ಟಬೇಕು ಎನ್ನುವ ವಿವರಗಳಿವೆ.[೫]

ದೇವಾಲಯಗಳ ಚರಿತ್ರೆಯ ರಚನೆಯಲ್ಲಿ ಪ್ರಮುಖ ಮಾಧ್ಯಮಗಳಾಗಿ ಕಾರ್ಯನಿರ್ವಹಿಸುತ್ತವೆ. ಇವುಗಳು ಮಾನವನ ಚರಿತ್ರೆ ಮತ್ತು ಅವನ ಜೀವನದ ವಿವಿಧ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ದೇವಾಲಯವು ಮಾನವನ ಧಾರ್ಮಿಕ ಶ್ರದ್ದೆಯ ಪ್ರಮುಖ ಕೇಂದ್ರವಾಗಿದೆ. ಇದಕ್ಕೆ ತನ್ನದೇ ಆದ ಸಂಸ್ಕೃತಿ ಹಾಗೂ ಭವ್ಯ ಪರಂಪರೆ ಬೆಳೆದುಬಂದಿದೆ. ಮಾನವ–ದೈವ–ಇಹಪರ, ವಾಸ್ತವಿಕ–ಆದರ್ಶ ಇವುಗಳ ಸಮ್ಮಿಲನದ ಸಂಕೇತವೇ ದೇವಾಲಯ.[೬] ಲೋಕದ ರಕ್ಷಣೆಗಾಗಿ ಭಗವಂತನು ಭೂಮಿಯಲ್ಲಿ ವಾಸಮಾಡುವ ಸ್ಥಳವಾದ ದೇವಾಲಯ ಜೀವಾತ್ಮ ಮತ್ತು ಪರಮಾತ್ಮನಲ್ಲಿರುವ ಅಂತರವನ್ನು ಕಡಿಮೆ ಮಾಡುತ್ತದೆ. ಜಗತ್ತಿನ ಸೃಷ್ಟಿಕರ್ತ ಹಾಗೂ ನಿಯಂತ್ರಣ ಎನ್ನಲಾಗುವ ದೇವರ ಬಳಿ ಹೋಗಲು ಸರಿಯಾದ ಮಾರ್ಗವನ್ನು ತೋರಿಸುವಂತ ಅವನನ್ನು ಪ್ರಾರ್ಥಿಸುವ ಸ್ಥಳವೇ ದೇವಾಲಯವಾಗಿದೆ.[೭] ಆಗಿದೆ ಎಂದು ಹೇಳಬಹುದು.

ದೇವಾಲಯದ ಉಗಮವು ತುಂಬಾ ಪ್ರಾಚೀನತೆಯನ್ನು ಪಡೆದಿದ್ದು, ಅದರ ನಿರ್ದಿಷ್ಟ ಸ್ವರೂಪ ವ್ಯಕ್ತವಾಗಿರುವುದಿಲ್ಲ ಕ್ರಿಪೂ ೩೦೦೦ ವರ್ಷಗಳಷ್ಟು ಹಿಂದಿನ ಹರಪ್ಪ ಮತ್ತು ಮೆಹೆಂಜೋದಾರೋ ಉತ್ಖನನಗಳಲ್ಲಿ ಸಾರ್ವತ್ರಿಕ ಕಟ್ಟಡಗಳು ದೊರೆತರೂ ಅವುಗಳನ್ನು ದೇವಾಲಯಗಳು ಎನ್ನಲಾಗದು. ಸಿಂಧೂ ನಿವೇಶನಗಳಲ್ಲಿ ಸುಮಾರು ೨೦೦೦ಕ್ಕೂ ಅಧಿಕ ಮುದ್ರೆಗಳು ದೊರೆತಿವೆ. ಮೊಹೆಂಜೋದಾರೊದಲ್ಲಿ ದೊರೆತ ನರ್ತಕಿಯ ಕಂಚಿನ ವಿಗ್ರಹ, ಪುರೋಹಿತನ ಶಿಲ್ಪ, ಪಶುಪತಿ, ಗೂಳಿ ಹಾಗೂ ಇನ್ನಿತರ ಪ್ರಾಣಿ ಪಕ್ಷಿಗಳ ಮುದ್ರೆಗಳು ಅವರ ಕಲಾ ಆಸಕ್ತಿಗೆ ಸಾಕ್ಷಿಯಾಗಿವೆ. ಇವುಗಳಿಂದ ನಮಗೆ ಸ್ಪಷ್ಟವಾಗುವ ಒಂದು ಅಂಶವೆಂದರೆ, ದೇವಾಲಯಗಳ ರಚನೆ ಮೊದಲೇ ಮೂರ್ತಿಶಿಲ್ಪ ಬೆಳವಣಿಗೆಯಾಗಿತ್ತು. ಮೂರ್ತಿ ಆರಾಧನೆಯು ಆರಂಭವಾದ ನಂತರ ಅದರ ರಕ್ಷಣೆಗಾಗಿ ವಾಸ್ತು ಸ್ವರೂಪವನ್ನು ನೀಡಲಾಯಿತ್ತು.

ಕ್ರಿ.ಶ. ೩ನೇ ಶತಮಾನದ ವೇಳೆಗೆ ಭಾರತೀಯ ವಾಸ್ತುಶಿಲ್ಪಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಕೀರ್ತಿ ಮೌರ್ಯರಿಗೆ ಸಲ್ಲುತ್ತದೆ. ಅವರ ಕಾಲದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳು ತೀವ್ರಗೊಂಡು ಬೌದ್ದ ಧರ್ಮವು ಜಗತ್ತಿನಲ್ಲೆಲ್ಲ ಅತ್ಯಂತ ಪ್ರಬಲ ಧರ್ಮವಾಗಿ ಬೆಳೆಯಲು ಕಾರಣವಾದವು. ಬುದ್ದನ ಅವಶೇಷಗಳನಿಟ್ಟು ಅವುಗಳ ರಕ್ಷಣೆಗಾಗಿ ಸ್ತೂಪಗಳು ನಿರ್ಮಾಣವಾದವು. ಇದನ್ನು ಬೃಹತ್ ಶಿಲಾ ಸಂಸ್ಕೃತಿಯ ಸಮಾಧಿಯ ಮುಂದುವರಿದ ಅಂಶವೆಂದು ವಿದ್ವಾಸಂರು ಅಭಿಪ್ರಾಯಸಿದ್ದಾರೆ. ದಕ್ಷಿಣ ಭಾರತದಲ್ಲಿ ಈ ರೀತಿಯ ವೃತ್ತಾಕಾರದಲ್ಲಿ ನಿರ್ಮಿಸಿರುವ ಸಮಾಧಿಗಳನ್ನು

ಕಾಣಬಹುದು.[೮] ಕರ್ನಾಟಕದಲ್ಲಿ ಈ ರೀತಿಯ ವಾಸ್ತುರಚನೆಯುಳ್ಳ ಕಟ್ಟಡಗಳು ಶಾತವಾಹನರ ಆಳ್ವಿಕೆಯ ಅನೇಕ ನೆಲೆಗಳಲ್ಲಿ ಕಂಡುಬಂದಿದೆ.

ಗುಪ್ತರು ಮೊಟ್ಟಮೊದಲು ಕಲ್ಲುನಿಂದ ದೇವಾಲಯವನ್ನು ಕಟ್ಟಲು ಪ್ರಾರಂಭಿಸಿದರು. ಅದುವರೆಗೂ ಸಾಧಾರಣವಾಗಿ ಇಟ್ಟಿಗೆ, ಮರ, ಮಣ್ಣುಗಳಿಂದ ದೇಗುಲಗಳನ್ನು ನಿರ್ಮಿಸಲಾಗುತ್ತಿತ್ತು. ಅವು ಬೇಗ ನಾಶ ಹೊಂದುವಂತಹ ವಸ್ತುಗಳಿಂದ ನಿರ್ಮಿಸಿದ ವಾಸ್ತು ರಚನೆಗಳಾದ್ದರಿಂದ ಗುಪ್ತರ ದೇವಾಲಯಗಳು ಸರಳತೆ ಹಾಗೂ ನಿರಾಲಂಕೃತವಾಗಿ ನಿರ್ಮಾಣಗೊಂಡಿವೆ. ಕರ್ನಾಟಕದಲ್ಲಿ ಕದಂಬರ ಅವಧಿಯಲ್ಲಿ ಇಟ್ಟಿಗೆಗಳಿಂದ ನಿರ್ಮಾಣಗೊಂಡಿರುವ ದೇವಾಲಯಗಳನ್ನು ಕಾಣಬಹುದು. ಕ್ರಿ.ಶ.೩ನೇ ಶತಮಾನದಿಂದ ಮೈಸೂರು ಒಡೆಯರ ಅವಧಿವರೆಗೆ ವಾಸ್ತು ಶಿಲ್ಪಕಲೆಯ ಉಗಮ ಮತ್ತು ವಿಕಾಸದ ಹೆಜ್ಜೆಗಳನ್ನು ಗುರುತಿಸಬಹುದು.

ಗುಪ್ತರು ಕಲ್ಲಿನ ದೇವಾಲಯಗಳನ್ನು ನಿರ್ಮಿಸಿದಂತೆ, ನಂತರದಲ್ಲಿ ಬಾದಾಮಿ ಚಾಲುಕ್ಯ ಹಾಗೂ ಪಲ್ಲವರು ಸಹ ದಕ್ಷಿಣ ಭಾರತದಲ್ಲಿ ಮೊಟ್ಟಮೊದಲು ಬಾರಿಗೆ ಶಿಲೆಯಿಂದ ದೇವಾಲಯಗಳನ್ನು ನಿರ್ಮಿಸಿದ್ದಾರೆ. ನಂತರದ ರಾಷ್ಟ್ರಕೂಟರ ಅವಧಿಯಲ್ಲಿ ವಾಸ್ತುಶಿಲ್ಪವು ಸ್ಪಷ್ಟರೂಪವನ್ನು ಪಡೆದುಕೊಂಡಿತು. ಕಲ್ಯಾಣ ದೇವಾಲಯಗಳನ್ನು ಹೆಚ್ಚು ಕಪ್ಪು ಮಿಶ್ರಿತ ನೀಲಿ ಛಾಯೆ ಬಳಪದ ಕಲ್ಲಿನಲ್ಲಿ ನಿರ್ಮಿಸಿದ್ದಾರೆ. ಆದುದ್ದರಿಂದ ಅವರ ದೇವಾಲಯಗಳು ಅತ್ಯಂತ ಸೂಕ್ಷ್ಮಕೆತ್ತನೆ ಹಾಗೂ ಹೆಚ್ಚು ಅಲಂಕಾರಿಕವಾಗಿವೆ.[೯]

ಹೊಯ್ಸಳರ ಕಾಲವು ದೇವಾಲಯಗಳ ನಿರ್ಮಾಣ ವಿಕಾಸದದಲ್ಲಿ ಆಕರ್ಷಕವಾದ ಕಾಲಘಟ್ಟ ಎನ್ನಬಹುದು. ಇವರು ತಮ್ಮ ದೇವಾಲಯಗಳನ್ನು ನಿರ್ಮಿಸಲು ಬಳಸಿದ ಮಾಧ್ಯಮ ಅತ್ಯಂತ ಸೂಕ್ಷ್ಮಕೆತ್ತನೆ ಪ್ರಸಿದ್ಧಿಯಾಗಿದೆ. ಇವರ ಕಾಲದ ವಾಸ್ತು ನಿರ್ಮಾಣವು 'ಹೊಯ್ಸಳ ಶೈಲಿ' ಎಂದೇ ಪ್ರತ್ಯೇಕವಾಗಿ ಗುರುತಿಸಿಕೊಂಡಿದೆ.[೧೦] ಹೊಯ್ಸಳರ ನಂತರ ದಕ್ಷಿಣ ಭಾರತದಲ್ಲಿ ವಿಜಯನಗರ ಅರಸರ ಕಾಲಕ್ಕೆ ದ್ರಾವಿಡ ಶೈಲಿ ಉಚ್ರಾಯ ಸ್ಥಿತಿ ತಲುಪಿರುವುದನ್ನು ಕಾಣಬಹುದು. ಇವರು ದೇವಾಲಯಗಳನ್ನು ನಿರ್ಮಿಸಲು ಗ್ರಾನೈಟ್ ಶಿಲೆಯನ್ನು ಬಳಸಿದರಿಂದ ಹೆಚ್ಚಿನ ಅಲಂಕಾರಿಕ ಅಂಶಗಳು ಕಂಡುಬರುವುದಿಲ್ಲ.

ಪ್ರಸುತ ಅಧ್ಯಯನ ಪ್ರದೇಶದಲ್ಲಿ ವಿಜಯನಗರ ಹಾಗೂ ವಿಜಯನಗೋತ್ತರ ಕಾಲದಲ್ಲಿ ನಿರ್ಮಾಣಗೊಂಡಿರುವ ದೇವಾಲಯಗಳನ್ನು ಕಾಣುತ್ತೇವೆ. ಅವುಗಳ ವಾಸ್ತುಶಿಲ್ಪವನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ತಂಬ್ರಹಳ್ಳಿ ಪರಿಸರದ ದೇವಾಲಯಗಳು :**

**ಬಂಡೆರಂಗನಾಥ ದೇವಾಲಯ :**

**ಗ್ರಾಮ ಸಂಖ್ಯೆ – ೦೧**

ಗ್ರಾಮ –ತಂಬ್ರಹಳ್ಳಿ

ಸ್ಥಳ – ಬೆಟ್ಟದ ಮೇಲೆ

ಸ್ಮಾರಕ – ಬಂಡೆರಂಗನಾಥ ದೇವಾಲಯ

ಕಾಲ – ಕ್ರಿ. ಶ. ಸು ೧೫ನೇ ಶತಮಾನ

ಶೈಲಿ – ವಿಜಯನಗರ ಶೈಲಿ

ಅಭಿಮುಖ – ಪೂರ್ವ

ಸ್ಥಿತಿ – ಉತ್ತಮ

ಸಂರಕ್ಷಣೆ – ಇಲ್ಲ

ಕ್ರಿ.ಶ. ೧೫ನೆಯ ಶತಮಾನದ ಈ ದೇವಾಲಯವು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿದ್ದು. ದ್ರಾವಿಡ ಶೈಲಿಯಲ್ಲಿದೆ. ಕಣ ಶಿಲೆಯಲ್ಲಿ ನಿರ್ಮಿಸಲಾಗಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಇದು ತಳ ವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪ ಭಾಗಗಳಿಂದ ಕೂಡಿದೆ. ಈ ದೇವಾಲಯದ ಗರ್ಭಗೃಹ ವೃತ್ತಾಕಾರವಾಗಿದ್ದು. (ಗರ್ಭಗೃಹವನ್ನು ನೈಸರ್ಗಿಕ ಬಂಡೆಯನ್ನು ಬಳಸಿ ಕಟ್ಟಿರುವುದರಿಂದ) ಇದು ೩.೨೫ ಮೀಟರ್ ಅಗಲವನ್ನು ಹೊಂದಿದೆ. ಇದರ ಹಿಂಭಾಗದ ಭಿತ್ತಿಗೆ ತಾಗಿ ಕೊಂಡಂತೆ ಇರುವ ನೈಸರ್ಗಿಕ ಬಂಡೆಯಲ್ಲ. ಗರ್ಭಗೃಹದ ಮಧ್ಯದಲ್ಲಿ ರಂಗನಾಥನ ಉಬ್ಬು ಶಿಲ್ಪವಿದೆ. ಭುವನೇಶ್ವರಿಯು ಅಷ್ಟಕೋನಾಕಾರದಲ್ಲಿದ್ದು. ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಪ್ರವೇಶದ್ವಾರವು ಸಾಧಾರಣವಾಗಿದ್ದು. ಇಕ್ಕಲಗಳಲ್ಲಿ ದ್ವಾರಪಾಲಕರ ವಿಗ್ರಹಗಳಿವೆ.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಈ ದೇವಾಲಯದ ಅಂತರಾಳವಿದ್ದು, ೨.೪೫ ಮೀಟರ್ ಉದ್ದ ಮತ್ತು ೬.೨೫ ಮೀಟರ್ ಅಗಲವನ್ನು ಹೊಂದಿದೆ. ಅಂತರಾಳದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

ಅಂತರಾಳ ಮುಂಭಾಗದ ಸಭಾ ಮಂಟಪವು ೭.೬೦ ಮೀಟರ್ ಉದ್ದ ಮತ್ತು ೬.೨೫ ಮೀಟರ್ ಅಗಲವನ್ನು ಹೊಂದಿದೆ. ನವರಂಗದಲ್ಲಿ ಒಟ್ಟು ೧೬ ಕಂಬಗಳಿದ್ದು. ಅವುಗಳಲ್ಲಿ ೪ ಸ್ವತಂತ್ರ ಕಂಬಗಳು ಮತ್ತು ೧೨ ಅರ್ಧಗಂಬಗಳಿವೆ. ನಾಲ್ಕು ಸ್ವಂತಂತ್ರ ಕಂಬಗಳು ಪೀಠ, ಕಾಂಡ, ಫಲಕದ ಮೂಲಕ ಮೇಳೆರುತ್ತಾ ಹೋಗಿ ಬೋದಿಗೆಯಲ್ಲಿ ಕೊನೆಗೊಂಡಿವೆ. ಇವುಗಳ ನಾಲ್ಕು ಮುಖದ ಚೌಕಗಳಲ್ಲಿ ಬಾಲಕೃಷ್ಣ, ಗಣಪತಿ, ಯಾಳಿ, ಆಂಜನೇಯ, ಕಾಳಿಂಗಮರ್ಧನ, ಲಜ್ಜಾಗೌರಿ ಮುಂತಾದ ಉಬ್ಬು

ಶಿಲ್ಪಗಳಿದ್ದು, ನಾಗಬಂಧವನ್ನು ಹೊಂದಿವೆ. ಭುವನೇಶ್ವರಿಯು ಅಷ್ಟಕೋನಾಕಾರದಲ್ಲಿದ್ದು, ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಪ್ರವೇಶದ್ವಾರವು ಸಾಧಾರಣವಾಗಿದೆ.

ತೆರದ ಮುಖಮಂಟಪವು ೩.೦೦ ಮೀಟರ್ ಉದ್ದ ಮತ್ತು ೨.೨೫ ಮೀಟರ್ ಅಗಲವನ್ನು ಹೊಂದಿದೆ. ಇದರಲ್ಲಿ ಒಟ್ಟು ೪ ಕಂಬಗಳಿವೆ ಅವುಗಳಲ್ಲಿ ೨ ಸ್ವತಂತ್ರ ಕಂಬಗಳು ಮತ್ತು ೨ ಅರ್ಧ ಗಂಬಗಳಿವೆ. ಮಧ್ಯದಲ್ಲಿರುವ ಎರಡು ಸ್ವತಂತ್ರ ಕಂಬಗಳು ಪೀಠ, ಕಾಂಡ, ಫಲಕದ ಮೂಲಕ ಮೇಲೆರುತ್ತಾ ಹೋಗಿ ಬೋದಿಗೆಯಲ್ಲಿ ಕೊನೆಗೊಂಡಿವೆ. ಇವು ನವರಂಗದಲ್ಲಿರುವ ಕಂಬಗಳಂತಿದೆ.

ದೇವಾಲಯದ ಗರ್ಭಗೃಹ ಮತ್ತು ಅಂತರಾಳದ ಭಾಗ ಮಾತ್ರ ಅಧಿಷ್ಠಾನದ ಮೇಲೆ ನಿಂತಿದೆ. ಅಧಿಷ್ಠಾನದ ಉಪಾನ, ಜಗತಿ, ಕಂಠಪಟ್ಟಿಕೆಗಳು ಎದ್ದುಕಾಣುತ್ತವೆ. ಅಧಿಷ್ಠಾನದ ಮೇಲ್ಭಾಗವು ತ್ರಿಪಟ ಕುಮುದ, ಕಪೋತಗಳಿಂದ ಕೂಡಿದೆ. ಭಿತ್ತಿಯ ಭಾಗವು ದೊಡ್ಡ ಗಾತ್ರದ ಕಲ್ಲು ಚಪ್ಪಡಿಗಳನ್ನು ಒಂದರ ಮೇಲೆ ಒಂದರಂತೆ ಇಟ್ಟು ನಿರ್ಮಿಸಲಾಗಿದೆ. ಭಿತ್ತಿಯ ಮೇಲೆ ಯಾವುದೇ ಅಲಂಕೃತ ಕೆತ್ತನೆಗಳಿಲ್ಲ ಗರ್ಭಗೃಹದ ಮೇಲೆ ಐದು ತಲಗಳಿಂದ ಕೂಡಿದ ದ್ರಾವಿಡ ಶೈಲಿಯ ಶಿಖರವಿದೆ.

**ಲಕ್ಷ್ಮೀ ದೇವಾಲಯ**

**ಸಂಖ್ಯೆ : ೦೨**

| | |
|---|---|
| ಗ್ರಾಮ – ತಂಬ್ರಹಳ್ಳಿ | ಶೈಲಿ – ವಿಜಯನಗರ |
| ಸ್ಥಳ – ಬೆಟ್ಟದಲ್ಲಿ | ಅಭಿಮುಖ – ಪೂರ್ವ |
| ಸ್ಮಾರಕ – ಲಕ್ಷ್ಮೀದೇವಾಲಯ | ಸ್ಥಿತಿ – ಮಧ್ಯಮ |
| ಕಾಲ – ಕ್ರಿ. ಶ. ಸು, ೧೫ನೇ ಶತಮಾನ | ಸಂರಕ್ಷಣೆ – ಇಲ್ಲ |

ಕ್ರಿ.ಶ. ಸುಮಾರು ೧೫ನೆಯ ಶತಮಾನದ ಈ ದೇವಾಲಯವು ವಿಜಯನಗರ ಶೈಲಿಯಲ್ಲಿದೆ. ಪೂರ್ವಾಭಿಮುಖವಾಗಿರುವ ದೇವಾಲಯವನ್ನು ಕಣಶಿಲೆಯಲ್ಲಿ ನಿರ್ಮಿಸಲಾಗಿದೆ. ಇದು ಗರ್ಭಗೃಹ, ಸಭಾ ಮಂಟಪ ಮತ್ತು ಅಂತರಾಳಗಳಿಂದ ಕುಡಿದೆ.

ಗರ್ಭಗೃಹವು ಚೌಕಕಾರವಾಗಿದ್ದು ಇದು ೩.೦೦ ಮೀಟರ್ ಉದ್ದ ಮತ್ತು ೩.೦೦ ಮೀಟರ್ ಅಗಲವಿದೆ. ಇದರ ಹಿಂಭಾಗದ ಭಿತ್ತಿಗೆ ತಾಗಿಕೊಂಡಂತೆ ಲಕ್ಷ್ಮೀದೇವಿಯ ಪ್ರತಿಷ್ಠಾಪಿಸಲಾಗಿದೆ. ಇದರ ಭುವನೇಶ್ವರಿಯು ಅಷ್ಟಕೋನಾಕಾರದಲ್ಲಿದ್ದು, ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಪ್ರವೇಶದ್ವಾರವು ಸಾಧಾರಣವಾಗಿದ್ದು, ಇಕ್ಕೆಲಗಳಲ್ಲಿ ದ್ವಾರ ಪಾಲಕರ ವಿಗ್ರಹಗಳಿವೆ. ಲಲಾಟಬಿಂಬದಲ್ಲಿ ಅರಳಿದ ಪುಷ್ಪವಿದೆ.

ಗರ್ಭಗಳನ್ನು ಹೊಂದಿಕೊಂಡತಿರುವ ಅಂತರಾಳವು ೨.೫೦ ಮೀಟರ್ ಉದ್ದ ಮತ್ತು ೩.೦೦ ಮೀಟರ್ ಅಗಲವನ್ನು ಹೊಂದಿದೆ. ಇಲ್ಲಿ ಯಾವುದೇ ಕೋಷ್ಠಕಗಳು ಮತ್ತು ಶಿಲ್ಪಗಳು ಕಂಡುಬರುವುದಿಲ್ಲ.

ಸಭಾಮಂಟಪದ ಭಾಗವನ್ನು ನವಿಕರಿಸಲಾಗಿದೆ. ದೇವಾಲಯದ ಗರ್ಭಗೃಹ ಮತ್ತು ಅಂತರಾಳದ ಭಾಗವು ಮಾತ್ರ ಅಧಿಷ್ಠಾನದ ಮೇಲೆ ನಿಂತಿದೆ. ಇವುಗಳಲ್ಲಿ ವಿಶೇಷವಾಗಿ ಉಪಾನ, ಜಗತಿ, ಕಂಠಪಟ್ಟಿಕೆಗಳು ಎದ್ದು ಕಾಣುತ್ತೇವೆ. ಈ ದೇವಾಲಯದ ಹೊರಭಿತ್ತಿಯ ಭಾಗವು ಕಲ್ಲುಚಪ್ಪಡಿಗಳನ್ನು ಒಂದರ ಮೇಲೆ ಒಂದರಂತೆ ಇಟ್ಟು ನಿರ್ಮಿಸಲಾಗಿದೆ. ಗರ್ಭಗೃಹದ ಮೇಲೆ ಐದು ತಲಗಳಿಂದ ಕೂಡಿದ ದ್ರಾವಿಡ ಶೈಲಿಯ ಶಿಖರವಿದೆ. ಶಿಖರದಲ್ಲಿ ಕೋಷ್ಠಕಗಳಿದ್ದು ಅವುಗಳಲ್ಲಿ ಗಾರೆ ಶಿಲ್ಪಗಳನ್ನು ಇಡಲಾಗಿದೆ.

**ಕನಕರಾಯ ದೇವಾಲಯ :**

**ಸಂಖ್ಯೆ : ೦೩**

| | |
|---|---|
| ಗ್ರಾಮ – ತಂಬ್ರಹಳ್ಳಿ | ಶೈಲಿ – ವಿಜಯನಗರ |
| ಸ್ಥಳ – ಬೆಟ್ಟದಲ್ಲಿ | ಅಭಿಮುಖ – ಪೂರ್ವ |
| ಸ್ಮಾರಕ – ಕನಕರಾಯ ದೇವಾಲಯ | ಸ್ಥಿತಿ – ಮಧ್ಯಮ |
| ಕಾಲ – ಕ್ರಿ. ಶ. ಸು, ೧೫ನೇ ಶತಮಾನ | ಸಂರಕ್ಷಣೆ – ಇಲ್ಲ |

ಕನಕರಾಯ ದೇವಾಲಯವು ೧೫ನೇ ಶತಮಾನದಲ್ಲಿ ಪಾಳೆಯಗಾರರ ಆಡಳಿತದ ಅವಧಿಯಲ್ಲಿ ನಿರ್ಮಾಣವಾದಂತಹ ದೇವಾಲಯ ಇದು ಅದಿಷ್ಠಾನ ಸುಂದರವಾದ ಗರ್ಭಗುಡಿಯಿಂದ ಕೂಡಿದೆ. ಗರ್ಭಗೃಹದಲ್ಲಿ ಮೂರ್ತಿಶಿಲ್ಪವಿದೆ ಇಲ್ಲಿ ದೇವರ ಔಆಯ ಚಿತ್ರಗಳು ಮಾತ್ರ ಕಂಡು ಬಂದಿದೆ ಹಾಗೆಯೇ ದೇವಾಲಯದಲ್ಲಿ ಕಲ್ಲಿನಲ್ಲಿ ಉದ್ಭವಿಸಿದ ಈಶ್ವರನಿದ್ದಾನೆ, ಈ ದೇವಾಲಯದ ಗೋಡೆಗಳ ಮೇಲೆ ನಾಗರಹಾವಿನ ಉಬ್ಬು ಶಿಲ್ಪಗಳಿವೆ.

ಹೀಗೆ ಅಂದಿನ ಪಾಳೆಯಗಾರರು ತಂಬ್ರಹಳ್ಳಿಯಲ್ಲಿ ದೇವಾಲಯಗಳು ಗುಡಿಗೋಪುರಗಳನ್ನು ನಿರ್ಮಿಸಿದಂತೆ ಅಂದಿನ ರಾಜರು ಪಾಳೆಯಗಾರರು ಅನೇಕ ಸ್ಮಾರಕಗಳನ್ನು ಕಟ್ಟಿದ್ದರು. ಅವುಗಳನ್ನು ಮುಂದಿನ ಅಧ್ಯಾಯದಲ್ಲಿ ತಿಳಿಸಲಾಗಿದೆ.

**ಆಂಜನೇಯ ದೇವಾಲಯ :**

**ಸಂಖ್ಯೆ : ೦೪**

ಗ್ರಾಮ – ತಂಬ್ರಹಳ್ಳಿ
ಸ್ಥಳ – ಬೆಟ್ಟದಲ್ಲಿ
ಸ್ಮಾರಕ – ಆಂಜನೇಯ ದೇವಾಲಯ
ಕಾಲ – ಕ್ರಿ. ಶ. ಸು, ೧೫ನೇ ಶತಮಾನ
ಶೈಲಿ – ವಿಜಯನಗರ
ಅಭಿಮುಖ – ಪೂರ್ವ
ಸ್ಥಿತಿ – ಮಧ್ಯಮ
ಸಂರಕ್ಷಣೆ – ಇಲ್ಲ

ಆಂಜನೇಯ ದೇವಸ್ಥಾನವು ಬಂಡೆರಂಗನಾಥ ದೇವಾಲಯದ ಹತ್ತಿರದ ಮುತ್ತೂರು ಗ್ರಾಮದಲ್ಲಿದೆ. ಈ ದೇವಾಲಯವು ಸುಂದರವಾದ ವಾಸ್ತು ಸಜ್ಜೆಕೆಯಿಂದ ನಿರ್ಮಾಣವಾಗಿದೆ, ಗರ್ಭಗುಡಿಯಲ್ಲಿ ಆಂಜನೇಯ ಮೂರ್ತಿ ಇದ್ದು ಕಲ್ಲಿನ ಶಿಲ್ಪವಾಗಿದೆ. ಈ ದೇವಾಸ್ಥಾನದ ಮೂರ್ತಿಗಳನ್ನು ಅಲ್ಲಿನ ಪೂಜಾರಿಗಳು ಸುಂದರವಾಗಿ ಅಲಂಕೃತಗೊಳಿಸಿ ದಿನನಿತ್ಯ ಪೂಜಿಸುತ್ತಾರೆ. ದೇವಸ್ಥಾನವು ಗರ್ಭಗುಡಿ ಅಂತರಾಳ, ಪ್ರವೇಶ ದ್ವಾರಗಳಿಂದ ಕೂಡಿದ್ದು ಗೋಪುರವನ್ನು ಹೊಂದಿದ್ದೆ, ಹಾಗೇಯೇ ದೇವಸ್ಥಾನದ ಮುಂಭಾಗದಲ್ಲಿ ಒಂದು ಬೃಹತ್ ಶೀಲಸ್ತಂಭವಿದೆ. ದ್ವೀಪದ ಸ್ತಂಭ ಅಥವಾ ಗರುಡ ಸ್ತಂಭ ತಿಳಿಸುತ್ತದೆ.

**ಕಲ್ಲೇಶ್ವರ ದೇವಾಲಯ: ಚಿಲುಗೋಡು :**

**ಸಂಖ್ಯೆ : ೦೫**

ಗ್ರಾಮ – ಚಿಲುಗೋಡು
ಸ್ಥಳ – ಹಳೇ ಗ್ರಾಮ
ಸ್ಮಾರಕ – ಕಲ್ಲೇಶ್ವರ ದೇವಾಲಯ
ಕಾಲ – ಕ್ರಿ. ಶ. ಸು, ೧೧ನೇ ಶತಮಾನ
ಶೈಲಿ – ಕಲ್ಯಾಣ ಚಾಲುಕ್ಯರು
ಅಭಿಮುಖ – ಪೂರ್ವ
ಸ್ಥಿತಿ – ಮಧ್ಯಮ
ಸಂರಕ್ಷಣೆ – ಇಲ್ಲ

ಕ್ರಿ.ಶ.ಸುಮಾರು ೧೧ನೆಯ ಶತಮಾನದಲ್ಲಿ ನಿರ್ಣಮಾಣವಾಗಿರುವ ಇದು ದೇವಾಲಯವು ದ್ರಾವಿಡ ಶೈಲಿಯಲ್ಲಿ ಕಪ್ಪು ಈ ದೇವಾಲಯವು ದ್ರಾವೀಡ ಶೈಲಿಯಲ್ಲಿದೆ. ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯನ್ನು ಬಳಸಿ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಚಿಲುಗೊಡು ಕಲ್ಲೇಶ್ವರ

ದೇವಾಲಯಗಳನ್ನು ಹೊಂದಿರುವುದರಿಂದ ಇದನ್ನು ದ್ವಿಕೂಟ ದೇವಾಲಯವಾಗಿದೆ. ಇಲ್ಲಿನ ಎರಡು ಗರ್ಭಗೃಹಗಳಿಗೆ ಒಂದೇ ಅಂತರಾಳ, ನವರಂಗ ಮಂಟಪ ಹಾಗೂ ಮುಖ ಮಂಟಪವಿದೆ. ಪೂರ್ವಾಭೀಮುಖವಾಗಿರುವ ಈ ದೇವಾಲಯವು ಅಂತರಾಳ ಮಂಟಪ ಹಾಗೂ ಮುಖಮಂಟಪಗಳಿಂದ ಹೊಂದಿದೆ. ದೇವಾಲಯವಾಗಿದೆ.

ದೇವಾಲಯದ ಮುಖ್ಯ ವಿಸ್ತೀರ್ಣವಾಗಿವೆ. ಗರ್ಭಗೃಹವು ಚಚ್ಚೌಕಾರವಾಗಿದ್ದು, ಇದು ೩.೧೦ ಮೀಟರ ಉದ್ದ ಮತ್ತು ೩,೧೦ ಮೀಟರ ಅಗಲವನ್ನು ಹೊಂದಿದೆ. ಇದರ ಮಧ್ಯದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಭುವನೇಶ್ವರಿಯು ಅಷ್ಟಕೋನಾಕಾರದಲ್ಲಿದ್ದು, ಮಧ್ಯದಲ್ಲಿ ಅರಳಿದ ಪುಷ್ಪ ಕೆತ್ತನೆಯಿದೆ. ಇದರ ಪ್ರವೇಶ ದ್ವಾರವು ಸಾಧಾರಣವಾಗಿದ್ದು. ಸ್ತಂಭ ಶಾಖೆಯಾರಿದನ್ನು ಮಾತ್ರ ಒಳಗೊಂಡಿದ್ದು ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳದ ಭಾಗವಾಗಿದ್ದು. ಇದು ೧.೪೫ ಮೀಟರ್ ಉದ್ದ ಮತ್ತು ೩.೧೦ ಅಗಲವಾಗಿದೆ ಗರ್ಭಗುಡಿಯ ಲಿಂಗಕ್ಕೆ ಎದುರಾಗಿರುವಂತೆ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಬಾಗಿಲುವಾಡವು ಸಾಧಾರಣವಾಗಿದೆ. ಈ ದೇವಾಲಯದ ಎರಡನೆಯ ಗರ್ಭಗೃಹವು (ಎತ್ತರ ಭಾಗದಲ್ಲಿ) ಚೌಕಕಾರವಾಗಿದ್ದು, ಇದು ೨.೧೫ ಮೀಟರ್ ಉದ್ದ ಮತ್ತು ೨.೫೦ ಮೀಟರ್ ಅಗಲವನ್ನು ಹೊಂದಿದೆ. ಇದರ ಮಧ್ಯದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಸಲಾಗಿದೆ. ಭುವನೇಶ್ವರಿಯು ಅಷ್ಟಕೋನಾಕಾರದಲ್ಲಿದ್ದು, ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಇದು ಸಭಾಮಂಟಪಕ್ಕೆ ತರೆದಿರುತ್ತದೆ.

ಎರಡು ಗರ್ಭಗೃಹಕ್ಕೆ ಒಂದೇ ಸಭಾಮಂಟಪವಿದ್ದು, ಇದು ೬.೨೫ ಮೀಟರ್ ಉದ್ದ ಮತ್ತು ౭.೪೦ ಮೀಟರ್ ಅಗಲವನ್ನು ಹೊಂದಿದೆ. ಇದರಲ್ಲಿ ಒಟ್ಟು ಹದಿನಾರು ಕಂಬಗಳಿದ್ದು. ಅವುಗಳಲ್ಲಿ ನಾಲ್ಕು ಸ್ವತಂತ್ರ ಕಂಬಗಳು ಮತ್ತು ಹನ್ನೆರಡು ಅರ್ಧಗಂಬಗಳಿವೆ, ಅವುಗಳಲ್ಲಿನ ಮಧ್ಯದ ನಾಲ್ಕು ಕಂಬಗಳು ಪೀಠ, ಪಿಂಡಿ, ರಾಂಡ ಫಲಕದ ಮೂಲಕ ಮೇಲೆರುತ್ತಾ ಹೋಗಿ ಭೋದಿಗೆಯಲ್ಲಿ ಕೊನೆಗೊಂಡಿವೆ. ಇದರ ಭುವನೇ ಶ್ವರಿಯು ಅಷ್ಟಕೋನಾಕಾರದಲ್ಲಿದ್ದು, ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಇದರ ಪ್ರವೇಶದ್ವಾರವು ಸಾಧಾರಣವಾಗಿದೆ.

ತೆರೆದ ಮುಖ ಮಂಟಪವು ೨.೭೫ ಮೀಟರ ಉದ್ದ ಮತ್ತು ೩.೧೦ ಮೀಟರ್ ಅಗಲವನ್ನು ಹೊಂದಿದೆ. ಇದರಲ್ಲಿ ಎರಡು ಸಾಧಾರಣವಾದ ಕಂಬಗಳಿದ್ದು, ಇವು ಪೀಠ, ಪಿಂಡಿ, ಕಾಂಡ, ಫಲಕದ ಮೂಲಕ ಮೇಲೆರುತ್ತಾ ಹೋಗಿ ಬೋದಿಗೆಯಲ್ಲಿ ಕೊನೆಗೊಂಡಿವೆ.

ದೇವಾಲಯದ ಗರ್ಭಗೃಹ ಮತ್ತು ಅಂತರಾಳದ ಭಾಗವು ಮಾತ್ರ ಅಧಿಷ್ಠಾನದ ಬಾಗಗಳನ್ನು ಹೊಂದಿದೆ. ಇವುಗಳಲ್ಲಿ ವಿಶೇಷವಾಗಿ ಉಪಾನ ಜಗತಿ, ಕಂಠಪಟ್ಟಿಕೆಗಳು ಎದ್ದು ಕಾಣುತ್ತೇವೆ. ತ್ರಿಪಟ್ಟ,

ಕುಮುದ್ದ, ಕಪೋತಗಳು ಆದರೆ ಇಲ್ಲಿನ ಪಟ್ಟಿಕೆಗಳು ಶಿಲ್ಪಗಳಿಂದ ಅಲಂಕೃತವಾಗಿಲ್ಲ. ಈ ದೇವಾಲಯದ ಹೊರ ಭಿತ್ತಿಯ ಭಾಗವು ಕಲ್ಲು ಚಪ್ಪಡಿಗಳನ್ನು ಬಳಸಿ ಒಂದರ ಮೇಲೆ ಬಂದರಂತೆ ಇಟ್ಟು ನಿರ್ಮಿಸಿದ್ದು, ಯಾವುದೇ ಉಬ್ಬುಶಿಲ್ಪಗಳು ಇರುವುದಿಲ್ಲ, ದೇವಾಲಯದ ಮೇಲ್ಛಾವಣಿಯು.

**ಕಾಳಿಕಾಂಬ ದೇವಾಲಯ**

**ಸಂಖ್ಯೆ : ೦೬**

| | |
|---|---|
| ಗ್ರಾಮ – ತಂಬ್ರಹಳ್ಳಿ | ಶೈಲಿ – ವಿಜಯನಗರ |
| ಸ್ಥಳ – ಬೆಟ್ಟದಲ್ಲಿ | ಅಭಿಮುಖ – ಪೂರ್ವ |
| ಸ್ಮಾರಕ – ಕಾಳಿಕಾಂಬ ದೇವಾಲಯ | ಸ್ಥಿತಿ – ಮಧ್ಯಮ |
| ಕಾಲ – ಕ್ರಿ. ಶ. ಸು, ೧೫ನೇ ಶತಮಾನ | ಸಂರಕ್ಷಣೆ – ಇಲ್ಲ |

ಮರದಿಂದ ಕಂಡರಿಸಿರುವ ಈ ಮೂರ್ತಿಯು ಸುಮಾರು ಐದು ಅಡಿ ಎತ್ತರ, ಮೂರು ಅಡಿ ಅಗಲವಿದೆ. ಚತುರ್ಭುಜ ಭಂಗಿಯಲ್ಲಿ ನಿಂತಿರುವ ಕಾಳಿಯ ಸುತ್ತಲೂ ಬಳ್ಳಿಯಾಕಾರದ ಕೆತ್ತನೆಯಿಂದ ಕೂಡಿದ ಪ್ರಭಾವಳಿಯಿದ್ದು, ಮಧ್ಯದಲ್ಲಿ ಸಿಂಹಮುಖದ ಕತ್ತನೆಯಿದೆ. ಶಿಲ್ಪದಲ್ಲಿ ಕಾಳಿಯು ಬಳಗೈಯಲ್ಲಿ ತ್ರಿಶೂಲ, ಎಡಗೈಯಲ್ಲಿ ಡಮರುಗವನ್ನು ಹಿಡಿದಿರುವಳು, ಮತ್ತರಡು ಕೈಗಳನ್ನು ಅಬಯ ಮಯದ್ರೆ ಹಾಗೂ ವರಮುದ್ರೆ ಭಂಗಿಯಲ್ಲಿ ಕೆತ್ತಲಾಗಿದೆ. ಕೈ ಮತ್ತು ಕಾಲುಗಳಲ್ಲಿ ವಿವಿಧ ಆಭರಣಗಳನ್ನು ಧರಿಸಿದ್ದು, ಕೂರಳಿನಲ್ಲಿ ರುಂಡಮಾತಿಯೆದೆ. ಉದ್ದನೆಯ ಕಿರೀಟವನ್ನು ಧರಿಸಿದ್ದು ಅದರ ಮೇಲೆ ಐದು ತಲೆಯ ನಾಗರ ಹೆಡೆಯಿದೆ.

**೩.೨ ಮೂರ್ತಿಶಿಲ್ಪಗಳು**

ಭಾರತದಲ್ಲಿ ದೇವರ ಆರಾಧನೆ ಹಾಗೂ ವ್ಯವಸ್ಥಿತ ದೇವಾಲಯ ನಿರ್ಮಾಣ ಆರಂಭವಾಗಿನಿಂದಲೂ ದೇವತಾ ಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ನಡೆಯುತ್ತಾ ಬಂದಿದೆ. ಯಾವುದೇ ಪಂಥದ ದೇವಾಲಯವಾಗಿರಲಿ ಆ ದೇವಾಲಯಕ್ಕೆ ಒಂದು ದೇವರ ಮೂರ್ತಿ ಇದ್ದೇ ಇರುತ್ತದೆ. ಮೂರ್ತಿಗಳನ್ನು ಕುರಿತು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು ಮೂರ್ತಿಶಾಸ್ತ್ರ ಎಂದು ಕರೆಯುತ್ತಾರೆ.

ಮೂರ್ತಿ ಎಂಬ ಶಬ್ದಕ್ಕೆ ಪರ್ಯಾಯವಾಗಿ ಬಳಸಿದ ಶಬ್ಧಗಳಲ್ಲಿ ಅದೊಂದು ಭೌತಿಕ ವಸ್ತು ಎಂಬಂತೆ ಗ್ರಹಿಸಲಾಗುತ್ತದೆ. ದೇವತಾ ಮೂರ್ತಿಶಿಲ್ಪದ ಕುರಿತು ಇರುವ ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ ಮೊದಲಾದ ಶಬ್ದಗಳು ಇದನ್ನು ಇನ್ನೂ ಸ್ಪಷ್ಟವಾಗಿ ಸ್ಮರಿಸುತ್ತವೆ. ಇವೆಲ್ಲಾ ಒಂದು ನಿರಾಕಾರದ ಕಲ್ಪನೆಯನ್ನು ಯಥಾವತ್ತಾಗಿ ಅನುಸರಿಸಿದ ವಸ್ತು ಪರಿಕಲ್ಪನೆಯಿದೆ. ಅರ್ಚ್ಯಾ ಎಂಬ ಶಬ್ದ ಪೂಜಿಸಲ್ಪಡುವಂಥದ್ದು ಎಂದಾದರೆ ತನು, ವಪು ಮುಂತಾದ ಶಬ್ದಗಳ ಮೂರ್ತಿಯನ್ನು ದೇಹವನ್ನಾಗಿ ಗ್ರಹಿಸುವಲ್ಲಿ ಹಾಗೂ ದೇವರನ್ನು ಅದರ ಆತ್ಮವಾಗಿ ಪ್ರತ್ಯಕ್ಷಿಸುತ್ತವೆ.

ಮೂರ್ತಿ ಎಂಬ ಪದಕ್ಕೆ ಸಮನಾರ್ಥವಾಗಿ ಪ್ರತಿಮೆ ಎಂಬ ಪದ ಪ್ರಯೋಗದಲ್ಲಿದೆ ಅಲ್ಲದೇ ಮೂರ್ತಿಶಾಸ್ತ್ರವನ್ನು ಪ್ರತಿಮಾಶಾಸ್ತ್ರ ಎಂದು ಸಹ ಕರೆಯಲಾಗುತ್ತದೆ. ಇಂತಹ ಪ್ರತಿಮಾ ಲಕ್ಷಣವೆಂದರೆ ಒಂದು ದೇವತೆಯ ಲಕ್ಷಣಗಳನ್ನು ಮೂರ್ತಿರೂಪದಲ್ಲಿ ಪ್ರಮಣಬದ್ದವಾಗಿ ಹೀಗೆ ರಚಿಸಬೇಕು ಎಂಬುದನ್ನು ತಿಳಿಸುವ ಶಾಸ್ತ್ರವೇ ಮೂರ್ತಿಶಾಸ್ತ್ರ. ಶಾಸ್ತ್ರೀಯ ನಿರೂಪಣೆಯ ಪ್ರಕಾರ ಮೂರ್ತಿಯ ಒಂದು ರೂಪ ಒಂಬತ್ತು ಅಂಗಗಳನ್ನು ಒಳಗೊಂಡಿರುತ್ತದೆ, ಅವೆಂದರೆ ನ್ಯಾ ಸರೋ ಸಂಯೋಜನೆ ಅಲಂಕಾರ (ಆಭರಣ, ವಸ್ತುಕೋಶ) ಮುದ್ರೆ (ಹಸ್ತಮುದ್ರೆಗಳು) ಆಯುಧ, ಆಸನ, ವಾಹನ, ಅರಿ ಹಾಗೂ ಸುವಕ್ತಿ ಈ ಶಾಸ್ತ್ರೀಯ ಸಂಪ್ರದಾಯಕ್ಕೆ ಅನುಗುಣವಾಗಿ ದೇವರ ಮೂರ್ತಿಗಳು ರೂಪಗೊಳ್ಳುತ್ತವೆ. ಮೂರ್ತಿಶಿಲ್ಪ ನಿರ್ಮಾಣವಾಗಿರುವುದಕ್ಕೆ ಪ್ರಾಗಿತಿಹಾಸ ಕಾಲದಿಂದಲೂ ಚಾರಿತ್ರಿಕ ಆಧಾರಗಳು ದೊರೆಯುತ್ತವೆ. ಭಾರತದಲ್ಲಿ ವಿವಿಧ ನೆಲೆಗಳ ಉತ್ಖನನದಿಂದ ಮೂರ್ತಿ ಶಿಲ್ಪಕ್ಕೆ ಸಂಬಂಧಿಸಿದಂತೆ ಹಲವಾರು ಮಾಹಿತಿಗಳು ದೊರೆತಿವೆ. ಅವುಗಳಲ್ಲಿ ಬಿಹಾರ ರಾಜ್ಯದ ಚಿರಾಂಡ, ರಾಜಸ್ಥಾನದ ಬಿಹಾರ ಮಧ್ಯಪ್ರದೇಶ ನಲದೋಧಲಿ ಉತ್ತರ ಪ್ರದೇಶದ ಲಾಲ್-ಖಿಲದಲ್ಲಿ ಪ್ರಾಣಿ ಹಾಗೂ ಮಾತೃದೇವತೆಯ ಮಣ್ಣಿನ ಮುರ್ತಿಗಳ ದೊರೆತಿವೆ. ಇವುಗಳು ನಂತರದ ಭಾರತೀಯ ಮೂರ್ತಿಶಿಲ್ಪಗಳಿಗೆ ಪ್ರೇರಕವಾದವು. ಕರ್ನಾಟಕದ ಕಪ್ಪುಗಲ್, ಪಿಕ್ಲಿಹಾಳ್, ಸಂಗನಕಲ್ಲು, ತೆಕ್ಕಲಕೋಟೆ ಮುಂತಾದ ಕಡೆ ನಡೆದ ಉತ್ಖನನಗಳಿಂದ ನೂತನ ಶಿಲಾಯುಗ ಹಾಗೂ ತಾಮ್ರ ಶಿಲಾಯುಗಕ್ಕೆ ಸೇರಿದ ಸುಡಾವೆ ಮಣ್ಣಿನ ಗೊಂಬೆಗಳು ದೊರೆತಿವೆ. ಇವು ಅಂದಿನ ಧಾರ್ಮಿಕ ನಂಬಿಕೆ ಭಾವನೆ ಮತ್ತು ಪರಂಪರೆಯನ್ನು ಸೂಚಿಸುವ ಆಕರಗಳಾಗಿ ಇರುವುದಷ್ಟೇ ಅಲ್ಲದೇ ಕರ್ನಾಟಕ ಮೂರ್ತಿಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತವೆ.

ದಕ್ಷಿಣ ಭಾರತದಲ್ಲಿ ಶಾತವಾಹನರ ಕಲೆ ಕಡೆ ಪ್ರಭಾವಿಸಿದೆ. ನಾಗರ್ಜುನಕೊಂಡದಲ್ಲಿರುವ ಶಿಲ್ಪಗಳು ಶಾತವಾಹನರ ಶೈಲಿಗೆ ಅತ್ಯತ್ತಮ ಉದಾಹರಣೆಗಳಾಗಿವೆ. ಬಾದಾಮಿ ಚಾಲುಕ್ಯರು ಶಿಲ್ಪಗಳು ಕರ್ನಾಟಕದ ಐಹೊಳೆ, ಬಾದಾಮಿ, ಮಹಾಕೂಟ, ಪಟ್ಟದಕಲ್ಲು ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ.

ಐಹೊಳೆಯ ಮೇಗುತ್ತಿ ದೇವಾಲಯ, ಹುಚ್ಚಿಮಲ್ಲ ಗುಡಿ ಮತ್ತು ಲಾಡಾಖಾನ್ ಗುಡಿಗಳಲ್ಲಿರುವ ಶಿಲ್ಪಗಳು ಆರಂಭಿಕ ಹಂತದ ಅತ್ಯುತ್ತಮ ಶಿಲ್ಪಗಳಾಗಿವೆ. ಹೀಗೆ ವಿವಿಧ ಕಾಲಘಟ್ಟಗಳಲ್ಲಿ ಭಾರತ ಮತ್ತು ಕರ್ನಾಟಕದಲ್ಲಿ ಮೂರ್ತಿಶಿಲ್ಪದ ಕಲೆ ಬೆಳೆದುಕೊಂಡು ಬಂದ ಬಗೆಯನ್ನು ತಿಳಿಯಬಹುದು. ತಂಬ್ರಹಳ್ಳಿ ಪರಿಸರ ಪ್ರಾಚೀನ ಮತ್ತು ಮಧ್ಯಕಾಲೀನ ಕಾಲದಲ್ಲಿ ಹಲವು ಧರ್ಮಗಳ ತವರೂರಾಗಿತ್ತು. ಈ ಪ್ರದೇಶ ಹಲವು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟದ್ದುದರಿಂದ ವಿಭಿನ್ನಧರ್ಮಿಯರ ದೇವಾಲಯಗಳು ನಿರ್ಮಾಣಗೊಳ್ಳಲು ಸಾಧ್ಯವಾಗಿದೆ. ಈ ದೇವಾಲಯಗಳಲ್ಲಿ ಆಯಾ ಧರ್ಮಿಯರಿಗೆ ಸಂಬಂಧಿಸಿದ ಮೂರ್ತಿ ಪ್ರತಿಷ್ಠಾಪನೆ ಆಗಿರುವುದರ ಹಿನ್ನೆಲೆಯಲ್ಲಿ ತಂಬ್ರಹಳ್ಳಿಯ ಪರಿಸರ ಕ್ಷೇತ್ರಕಾರ್ಯ ಕೈಗೊಂಡು ಸಂಗ್ರಹಿಸಿರುವ ವಿವಿಧ ಮೂರ್ತಿಶಿಲ್ಪಗಳ ವಿವರಣೆಗಳನ್ನು ಮುಂದಿನಂತೆ ನಿರೂಪಿಸಲಾಗಿದೆ.

## ಲಿಂಗ

ಶಿವನನ್ನು ಲಿಂಗ ರೂಪದಲ್ಲಿ ಪೂಜಿಸುವ ವಾಡಿಕೆ ಪ್ರಾರಂಭದಿಂದಲೂ ಇದೆ. ಶಿವನ ಆಯುಧಗಳಾದ ಶೂಲ, ತ್ರಿಶೂಲ, ಶಿವನ ಮೂರ್ತಿಯಾದ ಲಿಂಗ ಇವು ವೈದಿಕ ಸಂಸ್ಕೃತಿಯ ಯಜ್ಞಯಾಗದಿಗಳ ಸಂದರ್ಭದಲ್ಲಿ ಬಳಕೆಯಿದ್ದ ಯೂಪದ ರೂಪಾಂತರಗಳಾಗಿವೆ. ಎಂದು ಹೇಳಲಾಗುತ್ತದೆ. ಲಿಂಗಗಳಲ್ಲಿ ಸ್ಥಾವರ ಮತ್ತು ಜಗಮ ಎನ್ನುವ ಎರಡು ಪ್ರಕಾರಗಳಿವೆ. ಸ್ಥಾವರವೆಂದರೆ ಬೃಹತ್ ಗಾತ್ರದ ಅಲುಗಾಡದೇ ಇರುವವು. ಜಂಗಮವೆಂದರೆ ಸಣ್ಣ ಸಣ್ಣ ಕಲ್ಲುಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೊಯ್ಯುವಂತಹವು ಜಂಗಮಲಿಂಗಕ್ಕಿಂತಲೂ ಸ್ಥಾಪರಲಿಂಗವೇ ಶ್ರೇಷ್ಠ ಪ್ರಾಚೀನ ಲಿಂಗಗಳಿಗೆ ಪೀಠವಿರಲ್ಲಿಲ್ಲ ನಂತರ ಪೀಠದ ಮೇಲೆ ಲಿಂಗವನ್ನು ಪ್ರತಿಷ್ಠಾಪಿಸಲು ಪ್ರಾರಂಭಿಸಿದರು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಪೀಠವಿರುವ ಒಂದು ಶಿವಲಿಂಗವಿದೆ. ಇದೇ ರೀತಿ ಲಿಂಗವು ವೃಷಭಾವತಿ ಮತ್ತು ಆರ್ಕಾವತಿ ನದಿಗಳು ಸೇರುವ ಪ್ರದೇಶದಲ್ಲಿ ಕಂಡುಬರುತ್ತದೆ. ತಂಬ್ರಹಳ್ಳಿಯಲ್ಲಿರುವ ಶಿವಲಿಂಗ ಎರಡು ಹಂತದ ವೃತ್ತಾಕಾರದ ಪೀಠದ ಮೆಲಿದೆ ಯಾವುದೇ ರೀತಿಯ ಅಲಂಕೃತ ಕೆತ್ತನೆಗಳು ಪೀಠ ಮತ್ತು ಲಿಂಗದೆ ಮೇಲೆ ಕಂಡು ಬರುವುದಿಲ್ಲ. ಹಬ್ಬ-ಹರಿದಿನಗಳಲ್ಲಿ ಇದನ್ನು ಪೂಜಿಸುತ್ತಿರುವುದು ಕಂಡುಬರುತ್ತದೆ.

## ವೀರಾಂಜನೇಯ

ಮಾಧ್ವ ಸಂಪ್ರದಾಯದಲ್ಲಿ ಹನುಮಂತನಿಗೆ ಹೆಚ್ಚಿನ ಪ್ರಾಶಸ್ತ್ಯವಿದೆ ಮಧ್ವಾಚಾರ್ಯರು ಹನುಮಂತ ಅವತಾರವೆಂದೂ ಎಣಿಕೆಯಿದೆ. ದರ್ಶನದಲ್ಲಿ ಅವನ ಪಾಲನೆ ಪತ್ರವನ್ನು ಕೊಟ್ಟಿದ್ದಾರೆ. ಮಾಧ್ವ ಸಂಪ್ರದಾಯದ ಪ್ರಭಾವದಿಂದ ಹನುಮಂತನ ಗುಡಿಗಳು ಕನ್ನಡ ನಾಡಿನಲ್ಲಿ ಹರಡಿದವು ಎನ್ನಬಹುದು.

ಅದರಲ್ಲಿಯೂ ಮಧ್ವಚಾರ್ಯರ ಪರಂಪರೆಯಲ್ಲಿ ಬಂದು ವ್ಯಾಸತೀರ್ಥರು ಹೋದಲ್ಲೆಲ್ಲಾ ಹನುಮಂತನ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡುತ್ತಾ ಬಂದರು.

ಹದಿನೈದನೇ ಶತಮಾನದ ವ್ಯಾಸರಾಯ ಪ್ರತಿಷ್ಠಾಪಿಸಿರುವ ವೀರಾಂಜನೇಯನ ಮೂರ್ತಿಯನ್ನು ಮುಳುಬಾಗಿಲಿನಲ್ಲಿ ಕಾಣಬಹುದು. ಕಾರ್ಯಕ್ಷೇತ್ರ ಸಂದರ್ಭದಲ್ಲೂ ಕೂಡಾ ವೀರಾಂಜನೇಯ ಮೂರ್ತಿಗಳ ಕಂಡುಬಂದಿವೆ. ಕಾಳಿಕಾಂಬ ದೇವಾಲಯದಲ್ಲಿ ಅಲಂಕೃತ ಕೆತ್ತನೆಯಿರುವ ಪೀಠದ ಮೇಲೆ ವೀರಾಂಜನೇಯ ಶಿಲ್ಪವಿದ್ದು ಎಲೆಯಾಕಾರದ ಕೆತ್ತನೆಯುಳ್ಳ ಪ್ರಭಾವಳಿಯಿಂದ ಈ ಮೂರ್ತಿ ಶಿಲ್ಪವು ಎಡಭಾಗಕ್ಕೆ ಮುಖಮಾಡಿ ನಿಂತಿದ್ದು ಎಡಗೈಯಲ್ಲಿ ಗದೆಯನ್ನು ಹಿಡಿದಿರೆ ಹಾಗೂ ಬಲಗೈಯನ್ನು ಮೇಲೆಕ್ಕೆ ಎತ್ತಲಾಗಿದೆ. ಎದರ ಕೈ ಮತ್ತು ಕಾಲುಗಳಲ್ಲಿ ಕಡಗಳ ವಿವಿಧ ಆಭರಣಗಳನ್ನು ಧರಿಸಿದ್ದು ಕೊರಳಲ್ಲಿ ಕಂಠಿಹಾರದ ಕೆತ್ತನೆಯಿದೆ ಅಲ್ಲದೆ ತಲೆಯಲ್ಲಿ ರುದ್ರಾಕ್ಷಿ ಕಿರೀಟ ಕಂಡುಬರುತ್ತದೆ.

**ಗಣೇಶ**

ಗಣಪತಿಯ ಪ್ರಾಚೀನ ಶಿಲ್ಪಗಳು ನಿರಾಭರಣಗಳಾಗಿವೆ. ನಂತರದ ಕಾಲದಲ್ಲಿ ಕರಂಡ ಮುಕುಟ ಅಥವಾ ಜಟಾಮುಕುಟ, ರತ್ನಹಾರಗಳು, ಕಂಕಣ, ಉಪಮೀತ, ನಾಗಯ ಸ್ವಷ್ವತೆ ನೀತಿ ಇನ್ನೂ ಮುಂತಾದ ಅಲಂಕಾರದಿಂದ ಕೂಡಿದವು, ಶಾಸ್ತ್ರಗಳಲ್ಲಿ ವಕ್ರತುಂಡ, ಹಸ್ತವತ್ರ, ಏಕದಂತ, ಲಂಭೋದರ ಇನ್ನೂ ಮುಂತಾದಾಗಿ ವರ್ಣಿಸಲಾಗಿದೆ. ತಂಬ್ರಹಳ್ಳಿ ಗ್ರಾಮದ ಬಂಡೆರಂಗನಾಥ ಗುಡ್ಡದ ಬಳಿ ಇರುವ ಗಣೇಶ ಶಿಲ್ಪವನ್ನು ಕಪ್ಪುಶಿಲೆಯಿಂದ ಕಂಡರಿಸಲಾಗಿದೆ. ವೃತ್ತಾಕಾರದ ಪೀಠದ ಮೇಲಿರುವ ಈ ಶಿಲ್ಪದಲ್ಲಿ ಗಣೇಶನನ್ನು ಚತುರ್ಭುಜಗಳಲ್ಲಿ ಇರುವಂತೆ ಕಂಡರಿಸಿದ್ದು ಕೈಗಳಲ್ಲಿ ಶಂಖ, ಪಾಶ, ಅಂಕುಶ ಹಾಗೂ ಫಲಗಳನ್ನು ಹಿಡಿದಿರುವನು. ಕಿರೀಟದಾರಿ, ಕೊರಳಹಾರ, ಸರ, ಹಾಗೂ ಭುಜ ಬಂದಿ ಮೊದಲಾದ ಆಭರಣಗಳಿಂದ ಅಲಂಕೃತಗೊಂಡಿರುವನು. ಪ್ರಸ್ತುತ ಅಧ್ಯಯನ ಪ್ರದೇಶದ ಕೋಟೆ ಗಣೆಶನ ದೇವಾಲಯ ಹಾಗೂ ರಂಗನಾಥ ದೇವಾಲಯಯಲ್ಲಿ ಕಂಡು ಬರುವ ಗಣೇಶನ ವಿಗ್ರಹಗಳು ಸಾಮಾನ್ಯವಾಗಿ ಮೇಲ್ಕಂಡ ಲಕ್ಷಣಗಳನ್ನು ಹೋಲುತ್ತವೆ.

**ನಾಗರ ಶಿಲ್ಪ**

ವೃಕ್ಷ ಪೂಜೆಯ ಸಂದರ್ಭದಲ್ಲಿ ನಾಗರಪೂಜೆಯ ಆಚರಣೆ ಕೂಡ ಬಳೆದುಬಂದಿದೆ. ದಕ್ಷಿಣ ಭಾರತದಲ್ಲಿ ನಾಗಪೂಜೆ ಹರಡಿರುವ ಹಾಗೆ ಬೇರೆಲ್ಲಯೂ ಕಾಣಸಿಗದು, ಅರಳಿ ಮರದ ಕೆಳಗೆ ನಾಗರಕಲ್ಲು ನೆಡುವುದು. ಮಕ್ಕಳು ಹೆದರಿದರೆ ನಾಗಬಂಧ ಮಾಡಿಸುವುದು ರೂಢಿಯಲ್ಲಿದೆ. ಊರಿನ ಬಾಗಿಲ ಬಳಿ, ಕೆರೆ ಕೊಳಗಳ ದಂಡೆಯ ಮೇಲೆ, ಗುಡಿಗಳ ಪಕ್ಕದಲ್ಲಿ ಬೇವಿನಮರದ ಕೆಳಗೆ, ನಾಗರ

ಕಲ್ಲುಗಳನ್ನು ಕಾಣಬಹುದು. ಮಕ್ಕಳಿಲ್ಲದವರು, ನಾಗ ಪ್ರತಿಷ್ಠಾಪನೆ ಮಾಡಿದರೆ ಅಥವಾ ಪ್ರತಿಷ್ಠಾಪಿಸಿರುವ ನಾಗರ ಕಲ್ಲನ್ನು ಪೂಜಿಸಿದರೆ ಮಕ್ಕಲಾಳಗುತ್ತವೆಂಬ ನಂಬಿಕೆ ಜನರಲ್ಲದೆ. ಇದು ನಮ್ಮಲ್ಲಿ ಮಾತ್ರವಲ್ಲ ಕ್ರಿ.ಪೂ. ೨೬೦೦ ವರ್ಷಗಳಷ್ಟು ಹಿಂದೆಯೇ ಸುಮೇರಿಯನ ದೊರೆ "ಗುದಿಯನ ಸುರಾಪಾತ್ರೆಯ" ಮೇಲೆ ನಾಗ ಮಿಥುನ ಸ್ವಾರಸ್ಯದ ಚಿತ್ರಣವಿದೆ.

## ೩.೪. ತಂಬ್ರಹಳ್ಳಿ ಕೋಟೆ

ಕೋಟೆ ಎಂದರೆ ಆವರಣವುಳ್ಳ ಪ್ರದೇಶ ಎಂದರ್ಥ ಇದನ್ನು ಸಂಸ್ಕೃತದಲ್ಲಿ ದುರ್ಗ ಎಂದು ಕರೆಯುತ್ತಾರೆ. ಕೋಟೆಗೆ ಪುರ ಪುಕರ ಕಿಲ್ಲೆ ಎಂಬರ್ಥಗಳು ಉಂಟು. ಒಟ್ಟಾರೆ ಸೈನಿಕರಿಂದ ಆವರಿಸಲ್ಪಟ್ಟ ರಕ್ಷಿತವಾದ ಮತ್ತು ರಕ್ಷಣೆಗೆ ಮುಡಿಪಾಗಿರುವ ಗಟ್ಟಿಯಾದ ಸ್ಥಳವೇ ಕೋಟೆ ಎಂದೆನಿಸಿಕೊಳ್ಳುತ್ತದೆ.

ಪ್ರಾಚೀನ ಗ್ರಂಥವಾದ ಋಗ್ವೇದದಲ್ಲಿ ಪುರಗಳ ಉಲ್ಲೇಖವಿದೆ. ಪುರ ಎಂದರೆ ಭದ್ರವಾದಂತಹ ಕೋಟೆಯನ್ನು ಹೊಂದಿರುವ ಪಟ್ಟಣ ಎಂದರ್ಥ



ಮಾನವನು ತನ್ನ ನಾಗರೀಕತೆಯ ಪ್ರಗತಿ ಪಥದಲ್ಲಿ ತನ್ನ ಮತ್ತು ತನ್ನ ಸಮುದಾಯದ ಲೌಕಿಕ ಸಂಪತ್ತನ್ನು ಬೆಳೆಸುತ್ತಾ ನಡೆದನು ಹಲವು ಕಿರು ಸಮುದಾಯಗಳು ಬಂಡೆಯಲಿ ನೆಲೆಗೊಂಡಾಗ ವಿವಿಧ ವಿಶಿಷ್ಟ ಹಿತಾಸಕ್ತಿಯ ಸಮಾಜಗಳು ನಿರ್ಮಾಣಗೊಂಡವು. ರಾಜ್ಯಗಳ ಸಾಮ್ರಾಜ್ಯಗಳಾಗಿ ಉದಯವಾದವು ಇದರ ಪರಿಣಾಮವಾಗಿ ರಾಜವಂಶಗಳು ತನ್ನ ಸುತ್ತಲಿನ ಪರಿಸರದ ಅಭದ್ರತೆಯ ಬಗ್ಗೆ ಯೋಚಿಸಿದವು ಅಂತಯೇ ನೆಲೆ ನಿಂತಿದ್ದ ಊರಿನ ರಕ್ಷಣೆಗಾಗಿ ಕೋಟೆ ಕಟ್ಟಿಕೊಳ್ಳುವ ಅವಶ್ಯಕತೆ ಕಂಡು ಬಂದಿತು. ಆಳುವ ಅರಸನು ತನ್ನ ರಾಜ್ಯಗಳನ್ನು ರಕ್ಷಿಸಿಕೊಳ್ಳಲು ರಾಜಧಾನಿಗಳಲ್ಲಿ ಹಾಗೂ ಡಿಪ್ರದೇಶಗಳಲ್ಲಿ ಬೃಹತ್ ಆಕರದ ಕೋಟೆಗಳನ್ನು ಕಟ್ಟಿಸಿದನು. ಹೀಗಾಗಿ ಪ್ರಾಚೀನ ಕಾಲದ ಮಾನವರು ರಕ್ಷಣೆಯ ಕಾರ್ಯದಲ್ಲಿ ಕೋಟೆ ಮಹತ್ತರ ಪಾತ್ರವಹಿಸಿದೆ. ಹಿಂದೆ ಯುದ್ದಗಳು ನಡೆದಾಗ ಹೊರಗಿನ ಆಕ್ರಮಣ ತಡೆಯಲು ಕೋಟೆ ಕಟ್ಟಿಸಿಕೊಳ್ಳವುದು ಅವಶ್ಯವಾಗಿತ್ತು. ಕೋಟೆಯ ರಾಜಕೀಯವೆಂಬ ದೇಹದ ಪ್ರಮುಖ ಹಾಗೂ ಅಂಗವಾಗಿದ್ದಿತ್ತು.

ಹಗರಿಬೊಮ್ಮನಹಳ್ಳಿಯಿಂದ ಪಶ್ಚಿಮಕ್ಕೆ ಸುಮಾರು ೩೦ಕೀ.ಮೀ ದೂರದ ೩ಕಿ.ಮೀ ಅಂತರದಲ್ಲಿ ತಂಬ್ರಹಳ್ಳಿ ಉತ್ತರಭಾಗ(ಬಂಡಿ ಕ್ಯಾಂಪ್) ಇದೆ ಇದರ ಪೂರ್ವ ಬೆಟ್ಟದ ಮೇಲೆರುವುದೇ ತಂಬ್ರಹಳ್ಳಿ ಕೋಟೆ, ಈ ಕೋಟೆಯ ಬೆಟ್ಟದ ಮೇಲೆ ಇರುವುದರಿಂದ ರಂಗನಾಥ ಬೆಟ್ಟವೆಂದು ಕರೆಯುತ್ತಾರೆ.

ೋಟೆ ಇರುವ ರಂಗನಾಥ ಬೆಟ್ಟವನ್ನು ಪೂರ್ವ, ದಕ್ಷಿಣ, ಉತ್ತರ ದಿಕ್ಕುಗಳಲ್ಲಿ ತುಗಭದ್ರ ಅಣೆಕಟ್ಟಿನ ನ್ನಿರು ಸುತ್ತವರೆದಿದೆ. ಆದ್ದರಿಂದ ಈ ಕೋಟೆಯಲ್ಲಿ ಜಲದುರ್ಗವೆಂತಲೂ ಕರೆಯಬಹುದು.

ಓಬಳನಾಯಕನೆಂಬ ಸೇನಪತಿಯ ಕ್ರಿಶ ೧೫೫೧ ರಿಂದ ೧೬೧೬ ರ ದೀರ್ಘಾವಧಿಯವರೆಗೆ ಆಳ್ವಿಕೆ ಮಾಡಿದ್ದನು ಈತನು ಹರಪ್ಪನಹಳ್ಳಿ ಪಾಳೆಯಗಾರರ ಭೀಮಣ್ಣನಾಯಕನ ಸೈನ್ಯದಲ್ಲಿ ಕೆಲಕಾಲ ಇದ್ದು ಯುದ್ದಗಳಲ್ಲಿ ಅರಸನಿಗೆ ಜಯವನ್ನು ತಂದುಕೊಟ್ಟನು, ಜೊತೆಗೆ ಹರಪ್ಪನಹಳ್ಳಿ ರಾಜ್ಯ ವಿಸ್ತರಣೆಗೆ ಸಹಾಯಕನಾಗಿದ್ದನು. ಆದ್ದರಿಂದ ಹರಪ್ಪನಹಳ್ಳಿ ಪಾಲೆಯಗಾರರಿಗೆ ಇವನ ಮೇಲೆ ಹೆಚ್ಚು ಪ್ರೀತಿ ವಿಶ್ವಾಸಗಳಿದ್ದವು ಭೀಮಣ್ಣನಾಯಕ ರಾಜ್ಯದ ವಾಯುವ್ಯಭಾಗದ ತಂಬ್ರಹಳ್ಳಿ ಸೈನಿಕ ಗಡಿರಕ್ಷಣೆಯ ಮುಖ್ಯಸ್ಥನನ್ನಾಗಿ ಓಬಳನಾಯಕನನ್ನು ನೇಮಿಸಿದ್ದನೆಂದು ತಿಳಿದು ಬರುತ್ತದೆ.

ಮುಂದೆ ಇಲ್ಲಿ ಕೋಟೆ ಕಟ್ಟಿಕೊಂಡು ಸಾಮಂತ ಅರಸನಾಗಿ ರಾಜ್ಯವಾಳಲು ಪ್ರಾರಂಭಿಸಿದನು. ನಂತರ ಹರಪ್ಪನಹಳ್ಳಿ ರಾಜ್ಯದ ಮೇಲೆ ಅನ್ಯ ಅರಸರು ಯುದ್ದ ಸೇರಿದಾಗ ತಮ್ಮ ಒಡೆಯರಾದ ಹರಪ್ಪನಹಳ್ಳಿ ಪಾಳೆಯಗಾರರಿಗೆ ನಿಷ್ಠೆ ತೋರಿಸಿ ಅವರಿಗೆ ಎಲ್ಲಾ ರೀತಿಯ ನೆರವನ್ನು ಕೊಡುತ್ತಿದ್ದಾನೆಂದು ಸ್ಥಳೀಯ ಅಭಿಪ್ರಾಯ ಪಡುವರು.

ಹರಪ್ಪನಹಳ್ಳಿ ಪಾಳೆಯಗಾರರು ತಮ್ಮ ರಾಜ್ಯ ವಿಸ್ತರಣೆಯಲ್ಲಿ ರಾಜ್ಯದ ಹಲವೆಡೆ ತಮ್ಮ ಸೈನಿಕ ನೆಲೆಗಳನ್ನು ಸ್ಥಾಪಿಸಿ ಅಲ್ಲಿನ ರಕ್ಷಣೆಗಾಗಿ ಕೋಟೆಗಳನ್ನು ಕಟ್ಟಿಕೊಂಡಿದ್ದರು. ಉದಾಹರಣೆಗಾಗಿ ಕರಡಿದುರ್ಗ, ಬಂಡ್ರಿ, ಚಿಗಟೇರಿ, ವೀರಣ್ಣನ ದುರ್ಗ ಮುಂತಾದವುಗಳನ್ನು ವಾಯುವ್ಯಭಾಗದ ಗಡಿ ರಕ್ಷಣೆಗಾಗಿ ತಂಬ್ರಹಳ್ಳಿಯಲ್ಲಿಯೂ ಇವರು ಕೋಟೆಯನ್ನು ಕಟ್ಟಿಸಿದರು. ಓಬಳನಾಯಕ ಅಲ್ಲಿಯ ಶಾಸನದಲ್ಲಿ ಬರುವ ಯಟ್ಟಿಗೆಯ ಶಾನುಭೋಗರ ಮಗನಾಗಿದ್ದು, ಕೋಟೆ ಕಟ್ಟಿಕೊಂಡು ಸಾಮಂತ ಅರಸನಾಗಿ ರಾಜ್ಯವಾಳಲು ಪ್ರಾರಂಭಿಸಿದನೆಂದು ತಿಳಿದುಬರುತ್ತದೆ. ನಂತರ ಹರಪ್ಪನಹಳ್ಳಿ ರಾಜ್ಯದ ಮೇಲೆ ಅನ್ಯ ಅರಸರು ಯುದ್ದ ಸಾರಿದಾಗ ತಮ್ಮ ಒಡೆಯರಾದ ಹರಪ್ಪನಹಳ್ಳಿ ಪಾಳೆಯಗಾರರಿಗೆ ನಿಷ್ಠ ತೋರಿಸಿ ಅವರಿಗೆ ಎಲ್ಲಾ ರೀತಿಯ ನೆರವನ್ನು ಕೊಡುತ್ತಿದ್ದಾನೆಂದು ಸ್ಥಳೀಯರು ಅಭಿಪ್ರಾಯ ಪಡುವರು.

ಬೆಟ್ಟವನ್ನು ಬಳಸಿ ಸುತ್ತಲೂ ನಿರ್ಮಿಸಿದ್ದರೂ ಪ್ರಸ್ತುತ ಇಲ್ಲಿ ಹರಕಲು-ಮುರುಕಲು ಗೋಡೆಯ ಅವಶೇಷಗಳು ಮಾತ್ರ ಕಂಡುಬಂದಿವೆ. ಕೋಟೆಯ ದಕ್ಷಿಣ ಹಾಗೂ ಪೂರ್ವಭಾಗಗಳಲ್ಲಿ ಗೋಡೆಯ ಅವಶೇಷಗಳಿವೆ. ಕೋಟೆಯನ್ನು ತಳಪಾಯದ ಆಸರೆಯಿಲ್ಲದೇ ಹಾಸುಬಂಡೆಯ ಮೇಲೆ ಕಟ್ಟಲಾಗಿದೆ. ಕೋಟೆಯ ಆಯಾಕಟ್ಟನು ಸ್ಥಳಗಳಲ್ಲಿ ಇನ್ನಿತರ ಸ್ಮಾರಕಗಳಿದ್ದವಾದರೂ ಈಗ ಗೋಚರಿಸುವುದಿಲ್ಲ, ಇಲ್ಲಿಯ ಭೌಗೋಳಿಕ ಲಕ್ಷಣಗಳಿಂದಾಗಿ ಕೋಟೆಯ ಮುಖ್ಯಬಾಗಿಲು ದಕ್ಷಿಣದ ಕೋಟೆಯ

ಗೋಡೆಯಲ್ಲಿದ್ದಂತೆ ಕಾಣುತ್ತದೆ. ಈ ಭಾಗದಲ್ಲಿ ಕೋಟೆ ಒಳ ಹೋಗಲು ಸವೆದ ಮೆಟ್ಟಿಲುಗಳು ದಾರಿ ಇದೆ. ಕೋಟೆಯೊಳಗಿರುವ ನಿಸರ್ಗದತ್ತ ಬಂಡೆಗಳನ್ನು ನೀರಿನ ವ್ಯವಸ್ಥೆಗಾಗಿ ಹೊಂಡಗಳನ್ನು ನಿರ್ಮಿಸಿಕೊಂಡಿದ್ದರು. ಇಂತಹ ನಾಲ್ಕಾರು ಹೊಂಡಗಳು ಕೋಟೆಯ ನೈಋತ್ಯ ಭಾಗದಲ್ಲಿವೆ. ಇವುಗಳಿಗೆ ಹೆಸರುಗಳಿದ್ದವು, ಒಂದಕ್ಕೆ ಆನೆಹೊಂಡವೆಂದು ಕರೆದಿರುವುದು ಶಾಸನದಿಂದ ತಿಳಿದುಬರುತ್ತದೆ.

## ೩.೫ ಪುರಾತನ ಬಾವಿ

ತಂಬ್ರಹಳ್ಳಿ ಕೋಟೆಯ ದಕ್ಷಿಣ ದಿಕ್ಕಿಗೆ ಪಳೆಗಾರರ ಬಾವಿ (ಕಲ್ಯಾಣಿ) ಇದೆ. ಇದನ್ನು ತಂಬ್ರಹಳ್ಳಿಯ ಓಬಳನಾಯಕ ಕಟ್ಟಿಸಿದನೆಂದು ತಿಳಿದುಬರುತ್ತದೆ. ಇದು ಪೂರ್ವಾಭಿಮುಖವಾಗಿದ್ದು ಸುಮಾರು ೧೦೦ ಅಡಿ ಉದ್ದ ೧೫ ರಿಂದ ೨೦ಅಡಿ ಅಗಲವಾಗಿದೆ. ಪ್ರವೇಶದಲ್ಲಿ ಬಹಳ ಉದ್ದವಾದ ಮೆಟ್ಟಿಲುಗಳಿವೆ. ಪ್ರವೇಸದ ಪ್ರಾರಂಭದಲ್ಲಿ ಭೂಮಿಯ ಮಟ್ಟದ ಮೆಲೆ ಕಟ್ಟಿದ ಮುಖಮಂಟಪವಿದೆ. ಬಾವಿಯ ಮುಖ ಪಾತ್ರಕ್ಕೆ ಹೋಗುವಾಗ ಎರಡು ಬದಿಗೆ ಕುಳಿತು ವಿಶ್ರಮಿಸಲು ಗೂಡುಗಳನ್ನು ನಿಮಿಸಲಾಗಿದೆ. ಮೆಟ್ಟಿಲುಗಳು ನೀರಿರುವ ಭಾಗವನ್ನು ಸಂಧಿಸುವ ಸ್ಥಳದಲ್ಲಿ ಸೇತುವೆ ಇದೆ. ಸೇತುವೆಯ ಮೆಲೆ ಮಾಳಿಗೆ ಇದ್ದು ಇಲ್ಲಿ ವಿಶ್ರಾಂತಿ ಪಡೆಯಲು ಸ್ಥಳವಕಾಶವಿದೆ. ಬಾವಿಯನ್ನು ಅಲ್ಲಲ್ಲಿ ಶಿಲ್ಪಗಳಿಂದ ಅಲಂಕರಿಸಲಾಗಿದೆ. ನಾಲ್ಕು ದಿಕ್ಕಿನಿಂದ ನೀರನ್ನು ಮೇಲೆತ್ತುವ ವ್ಯವಸ್ಥೆ ಮಾಡಲಾಗಿದೆ. ಗೋಡೆಗಳಲ್ಲಿ ಚಿಕ್ಕ ಹಾಗೂ ದೊಡ್ಡ ಗೂಡುಗಲಿವೆ, ಇವುಗಳಲ್ಲಿ ಗಣೇಶ ಆಂಜನೇಯ ಗರುಡ ಕಳಿಂಗವರ್ದನೂ ಶಿಲ್ಪಗಳನ್ನು ಕೆತ್ತಲಾಗಿದೆ ಕೋಟೆಯೊಳಗೆ ವಾಸಮಾಡುತ್ತಿದ್ದವರಿಗೆ ಈ ಬಾವಿಯಿಂದ ನೀರು ಪೂರೈಕೆಯಾಗುತ್ತಿತ್ತೆಂದು ಸ್ಥಳೀಯರು ಅಭಿಪ್ರಾಯ ಪಡುವರು.

## ೩.೬ ಮುಖ ಮಂಟಪ

ಈ ಮುಖಮಂಟಪವು ತಂಬ್ರಹಳ್ಳಿಯಲ್ಲಿರುವ ಓಬಳೇಶನ ಬಾವಿಯ ಪ್ರವೇಶದ್ವಾರವಾಗಿದೆ ಬಾವಿಯನ್ನು ಪ್ರವೇಶಿಸಲು ಭೂಮಿಯ ಮೇಲ್ಭಾಗದಲ್ಲಿ ಇದನ್ನು ನಿರ್ಮಿಸಲಾಗಿದೆ. ಮುಖಮಂಟಪದ ಮೂಲಕ ಬಾವಿಯನ್ನು ಮೆಟ್ಟಿಲುಗಳ ಸಹಾಯದಿಂದ ಬಾವಿಯ ಕೆಳಭಾಗಕ್ಕೆ ಇಳಿದು ಹೋಗುವಂತೆ ಸುಂದರವಾಗಿ ಈ ಮುಖ ಮಂಟಪವನ್ನು ಕಂಬಗಳಿಂದ ಹಾಗೂ ಕಂಬಗಳೆಲ್ಲ ಕೆಲವು ರೀತಿಯ ಕೆತ್ತನೆಗಳಿಂದ ಈ ಮುಖಮಮಟಪವನ್ನು ನಿರ್ಮಿಸಲಾಗಿದೆ.

## ೩.೭ ಇತರೆ ಸ್ಮಾರಕಗಳು (ಸಿಂಹಾಸನ ಕಟ್ಟೆ)

ತಂಬ್ರಹಳ್ಳಿ ಕೋಟೆ ಹಾಳಾಗಿದ್ದುದರಿಂದ ಕೋಟೆಯ ಪ್ರದೇಶವನ್ನು ಕೃಷಿ ಭೂಮಿ ಮಾಡಿಕೊಳ್ಳಲೆಂದು ಇತ್ತೀಚಿನ ಸರ್ಕಾರ ಕಟ್ಟೆ ಸೇತುವೆವನ್ನು ರಾಮಚಾರ್ಯರಿಗೆ ಮಂಜೂರು ಮಾಡಿತ್ತು, ಅವರು ಬುಲ್ಡೋಜರ ತಂದು ಕೋಟೆ ಪ್ರದೇಶವನ್ನು ಸಮಮಾಡಿಸುವಾಗ ಭೂಮಿಯಲ್ಲಿ ಹುದುಗಿದ್ದ ದಾದಯ್ಯನಾಯಕನ ಸಿಂಹಸನಕಟ್ಟೆ ಕಾಣಿಸಿತ್ತು ಇದು ಕಲ್ಲು ಬಂಡೆಯ ಕಟ್ಟಡವಾಗಿದ್ದು ಎರಡು ಅಂತಸ್ತುಗಳಿದ್ದ ಮೂರನೇಯ ಪೀಠವಾಗಿತ್ತು ಇದರ ಕೆಳಗೆ ತಾಮ್ರದ ಹಚಿಡೇವು ಹಗಿಯಲಾಗಿತ್ತು ಅದರಲ್ಲಿ ಐದು ಸುವರ್ಣದ (ಬಂಗಾರದ) ನಾಣ್ಯಗಳಿದ್ದವು. ಇವುಗಳಲ್ಲಿ ಹರಪ್ಪನಹಳ್ಳಿ ಪಾಳೆಯಗಾರಿಕೆ ಪತನವಾಗಿ ಆಂಗ್ಲರ ವಾಸವಾದಾಗ ಅವರಿಗೆ ಬರೆದುಕೊಟ್ಟ ಕೈಫಿತ್ತಿನಲ್ಲಿ ದಾದಯ್ಯ ನಾಯಕನಿಗೆ ಪಟ್ಟಾಭೀಷೆಕವಾದ ವಿಚಾರ ಉಲ್ಲೇಖವಿದೆ.

**ಅಡಿಟಿಪ್ಪಣಿಗಳು**

೧) ಅನಂತ ರಂಗಾಚಾರ್ ಎನ್. ಭಾರತೀಯ ಶಿಲ್ಪಶಾಸ್ತ್ರ ಸಂಕಿಪ್ತ ಪರಿಚಯ, ಪು ೩೦೮

೨) ಅಂಬಳಿಕೆ ಹಿರಿಯಣ್ಣ (ಪ್ರ.ಸೋ) ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ ಪು. ೯೪೧

೩) ಪ್ರಭಾಕರು ಎಸ್, ದೇವಾಲಯಗಳ ವಾಸ್ತುಚಂದ್ರಿಕೆ. ಪು ೨೭

೪) ದೇವರಕೊಂಡಾರೆಡ್ಡಿ, ಭಾರತೀಯ ವಾಸ್ತುವಿದ್ಯೆ, ಪು,೮

೫) ಅದೇ.. ಪು.

೬) ರಾಮಚಂದ್ರರಾವ್ ಎಸ್.ಕೆ ಕೆಲವು ಧಾರ್ಮಿಕ ಕರ್ತವ್ಯಗಳು, ಪು–೮೦

೭) ಅದೇ.. ಪು. ೭೭.

೮) ಸುರೇಶ ಬಿ, ಚಿತ್ರದುರ್ಗ–ದಾವಣಗೇರೆ ಜಿಲ್ಲಾಗಳ ದೇವಾಲಯಗಳು, ಪು–೪

೯) ತಿಪ್ಪಣ್ಣ ಮರಿಕುಂಟೆ, ಹರ್ತಿಕೋಟೆ ಸ್ಮಾರಕಗಳು, ಲಕ್ಷಣ್ ತೆಲಗಾವಿ(ಪ್ರ,ಸಂ) ಹರತಿಸಿರಿ (ಸಂ) ಪಯ–೫೧೩

೧೦) ಕೃಷ್ಣಮೂರ್ತಿರಾವ್ ಹೆಚ್. ಹಗರಿಬೊಮ್ಮನಹಳ್ಳಿ ತಾಲೂಕು ತಂಬ್ರಹಳ್ಳಿ ಬಂಡೆರಂಗನಾಥೇಶ್ವರ ಮಹಾತ್ಮ–೨೦೧೨

೧೧ ಪರವೇಶ್ವರಯ್ಯ ಸೊಪ್ಪಿನ ಮರ ಹಗರಿಬೊಮ್ಮನಹಳ್ಳಿ ತಾಲೂಕು ದರ್ಶನ, ಪುಟ ಸಂ–೪–೫

೧೨ ರಾಜಾರಾಂ ಹೆಗಡೆ ಭಾರತೀಯ ಮೂರ್ತಿಶಾಸ್ತ್ರ, ಅರಿವು ಬರಹ (ಸಂ,೩ ಭಾಗ–೧) ಪು,೩೫

೧೩ ಅದೇ.. ಪು. ೩೬.

೧೪ ಅದೇ.. ಪು. ೬೭.

೧೫ ಷೇಕ ಅಲಿ, ಕರ್ನಾಟಕ ಚರಿತ್ರೆ ಸಂ ೧, ಪು,೨೪೨

೧೬ ಸುರೇಶ ಬಿ, ಕರ್ನಾಟಕ ಚರಿತ್ರೆ ಸಂ, ೧ ಪು, ೨೧೪

೧೭ ಅದೇ.. ಪು. ೨೧೪.

೧೮ ಅದೇ.. ಪು. ೨೧೯.

೧೯ ಅದೇ.. ಪು. ೩೨೫.

**ಅಧ್ಯಾಯ-೪ ನಂಬಿಕೆಗಳು ಮತ್ತು ಆಚರಣೆಗಳು**

೪.೧ ಐತಿಹ್ಯ ಮತ್ತು ಪುರಾಣಗಳು

೪.೨ ಜಾತ್ರೆಗಳು ಮತ್ತು ಉತ್ಸವಗಳು

೪.೩ ವಿಶೇಷ ಆಚರಣೆಗಳು

## ಅಧ್ಯಾಯ –೦೪

## ನಂಬಿಕೆ ಮತ್ತು ಆಚರಣೆಗಳು

ನಂಬಿಕೆ ಮತ್ತು ಆಚರಣೆಯು ಜನಪದ ಸಂಸ್ಕೃತಿಯ ಒಂದು ಭಾಗವಾಗಿದ್ದೆ ಆಚರಣೆ ಎಂದರೆ ಪ್ರತಿಯೊಂದು ಸಮುದಾಯವು ಪರಂಪರಾಗತವಾಗಿ ರೂಢಿಸಿಕೊಂಡು ಬಂದಿರುವ ನಿರ್ದಿಷ್ಟ ಸ್ಥಳದಲ್ಲಿ ಮತ್ತು ಕಾಲದಲ್ಲಿ ನಡೆಯುವ ಕ್ರಿಯೆಯಾಗಿದೆ. ಮಾನವನ ಉಗಮದಿಂದ ಆರಂಭಗೊಂಡಿರುವ ಆಚರಣೆಗಳು ಆತನ ಬದುಕಿನಲ್ಲಿ ಇಂದಿಗೂ ಪ್ರಮುಖ ಪಾತ್ರನಿರ್ವಹಿಸುತ್ತವೆ. ನಂಬಿಕೆಯು ಭೌತಿಕರೂಪ ಆಚರಣೆ, ನಂಬಿಕೆಗಳನ್ನು ಅಂಗೀಕರಿಸಿದಾಗ ಅವುಗಳ ಆಚರಣೆಯನ್ನು ದೃಢಪಡಿಸಿ ಪುನಶ್ಚೇತನಗೊಳಿಸುತ್ತವೆ. ಮಾನವನ ಹುಟ್ಟಿನಿಂದ ಸಾಯುವವರೆಗೂ ತನ್ನ ಜೀವನದ ವಿವಿಧ ಹಂತಗಳಲ್ಲಿ ಹಾಗೂ ಕಾಲದ ಪರಿವರ್ತನೆಯನ್ನು ಅನುಸರಿಸಿ ವಿವಿಧ ರೀತಿಯ ಆಚರಣೆಗಳು ನಡೆಯುತ್ತವೆ. ಇದು ಪ್ರತಿಯೊಂದು ಕಾಲಘಟ್ಟದಲ್ಲಿಯೂ ಜನತೆಯ ಮುಖ್ಯ ಉದ್ದೇಶವಾಗಿರುತ್ತದೆ. ೧.ಆಚರಣೆಗಳು ಧಾರ್ಮಿಕ ಸಂಬಂಧಿಯಾದ ಕ್ರೀಯಾ ರೂಪಗಳು ೨. ಮಾನವನ ಬದುಕನ್ನು ರೂಪಿಸುವಲ್ಲಿ, ಸಂಸ್ಕೃತಿಯ ಪೋಷಣೆಯಲ್ಲಿ ನಾಗರೀಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯ ಮತ್ತು ಆಚರಣೆಗಳು ಪಾತ್ರವಹಿಸಿವೆ. ಸಂಪ್ರದಾಯದ ಆಚರಣೆ ವಿಧಿ ನಿಕ್ಷೇಪ? ಅವುಗಳ ಸ್ಥಳೀಯ ಉದಾಹರಣೆಯೊಂದಿಗೆ ನಿರೂಪಿಸಲಾಗಿದೆ. ಹಾಗೂ ಮಾನವನ ಭೌದ್ಧಿಕ, ಮಾನಸಿಕ, ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಸನ್ನಿವೇಶಗಳ ಸ್ಥಿತಿಗಳನ್ನು ಅರಿಯಲಾಗಿದೆ.

ಮೋನಿಕಾ ವಿಲ್ಸನ್ ಅವರು ಆಚರಣೆ ಎಂಬುದು "ಧಾರ್ಮಿಕ ಕ್ರಿಯೆಯ ಮುಂದುವರೆದ ರೂಪ ಅತೀಂದ್ರಿಯಾ ಶಕ್ತಿ ಅಥವಾ ಶಕ್ತಿಗಳಿಂದ ಅನುಗ್ರಹ ಪಡೆಯಲು ಕೈಗೊಂಡ ಕ್ರಿಯೆ ಎಂದು ಕರೆದಿರುವರು." [೩] ಕ್ರಮವತ್ತಾದ ವಿಧಿನ ಪೂರಕವಾದ ಪರಂಪರಾಗತವಾಗಿ ನಡೆದು ಬಂದ ರೀತಿಯಲ್ಲಿ ನಡೆಯುವ ಇಂತಹ ಕ್ರಿಯೆಗಳ ಹಿನ್ನೆಲೆಯಲ್ಲಿ ನಂಬಿಕೆ ಆಳವಾಗಿ ಬೇರು ಬಿಟ್ಟಿರುತ್ತದೆ. ಧರ್ಮ ಇದರ ಅಡಿಗಲ್ಲು, ಧಾರ್ಮಿಕ ವಿಧಿಗಳಿಂದ ತಾನು ನಂಬಿದ ಪವಿತ್ರ ವಸ್ತುಗಳ ಪ್ರೀತಿಯನ್ನು ಸಂಪಾಧಿಸಬಹುದೆಂದು ಮನುಷ್ಯ ಎಣಿಸುತ್ತಾನೆ. ಇದು ಕ್ರಮವತ್ತಾದ ಅರ್ಚನಾಕ್ರಮವು ಹೌದು ಲೌಕಿಕ ಹಿನ್ನೆಲೆಯಲ್ಲಿ ಸಂಪ್ರದಾಯ ರೀತಿಯಲ್ಲಿ ನಡೆಸುವ ಒಂದು ಕ್ರಿಯೆಯೂ ಆಗಿರುತ್ತದೆ. ಧಾರ್ಮಿಕ ಪವಿತ್ರವಾದ ಜೊತೆಗೆ ಅತಿಮಾನುಷ ಶಕ್ತಿಗಳ ಭಯವು ಮಿಗಿಲಾದುದೇ ಆದ್ದರಿಂದ ಆಚರಣೆಗಳನ್ನು ಅತ್ಯಂತ ಶ್ರದ್ಧೆಯಿಂದ ನಡೆಸಲಾಗುತ್ತದೆ. ಆಚರಣೆಗಳು ಮಾನವ ಜೀವನದ ಅಂಗಗಳಾಗಿ ಬೆಳೆದು ಸಂಪ್ರದಾಯವಾಗಿ ಮಾರ್ಪಾಡಾಗುತ್ತವೆ. ಪ್ರಾಚೀನ ಕಾಲದಿಂದಲೂ ಈ ರೀತಿಯ ಆಚರಣೆಗಳನ್ನು ನಡೆಸಿಕೊಂಡು ಬಂದಿರುವುದನ್ನು ಕಾಣಬಹುದು ಕಾಲ ಕಾಲಕ್ಕೆ ಹೊಸ ಹೊಸ ಆಚರಣೆಗಳು

ರೂಪುಗೊಳ್ಳುತ್ತವೆ. ಇಲ್ಲವೇ ಇವು ಎಲ್ಲವೂ ಮಾನವನ ಮಾನಸಿಕ ನೆಮ್ಮದಿಯಿಂದಾಗಿ ಮಾಡಿಕೊಂಡಿರುವ ಚಿಕಿತ್ಸೆಯ ಸ್ವರೂಪದ ಸಾಧನೆಗಳ, ನಾಗರಿಕತೆಯ ಬೆಳವಣಿಗೆಯಲ್ಲಿ ಮಾನವನ ಕೃಷಿ ಆಧರಿತ ಬದುಕು ಇಮ್ಮಡಿಗೊಳಿಸಕೊಂಡಿವೆ. ಕಂಡುಬರುತ್ತದೆ ಈ ಹಿನ್ನೆಲೆಯಲ್ಲಿ ತಂಬ್ರಳ್ಳಿ ಗ್ರಾಮದಲ್ಲಿ ಕಂಡುಬರುವ ನಂಬಿಕೆ ಮತ್ತು ಆಚರಣೆಗಳು ಆ ಪ್ರದೇಶದ ಎಲ್ಲಾ ಸನ್ನಿವೇಶಗಳನ್ನು ಅವಲಂಭಿಸಿರುತ್ತವೆ..

**೪.೧ ಐತಿಹ್ಯ :**

ಐತಿಹ್ಯ ಎಂಬುದು ಇಂಗ್ಲೀಷಿನಲ್ಲಿ "Legend" ಎಂಬ ಪದಕ್ಕೆ ಸಂವಾದಿಯಾಗಿ ನಾವು "ಐತಿಹ್ಯ" ಎಂಬ ಪದವನ್ನು ಬಳಕೆಮಾಡಲಾಗುತ್ತದೆ. ಐತಿಹ್ಯದ ಮೂಲವಾದ "Legend" ಎಂಬ ಪದ ಮಧ್ಯಕಾಲೀನ ಲ್ಯಾಟಿನ್ನಿನ "ಲೆಜೆಂಡಾ" ಎಂಬ ರೂಪದಿಂದ ನಿಷ್ಪನ್ನವಾದುದು. ಇದರಡಿ ಪಠಿಸಬಹುದು ಎಂದಾಗುತ್ತದೆ. ಐತಿಹ್ಯ ಎಂದರೆ ಈಗ ವ್ಯಕ್ತಿ ಸ್ಥಳ ಅಥವಾ ಘಟನೆಯೊಂದರ ಸುತ್ತ ಸಾಂಪ್ರದಾಯಿಕವಾಗಿ ಮತ್ತು ಯಾವುದೇ ಮೂಲ ಸಂಗತಿಗಳ ಮೇಲಾಧಾರಿತವಾಗಿ ಬೆಳೆದು ಬಂದ ಕಥನ ಎಂದು ಸಾಮಾನ್ಯ ಅರ್ಥ ಪಡೆದುಕೊಂಡಿದೆ. "ಐತಿಹ್ಯ" ಕೆಲವು ಸಲ ಸತ್ಯ ಘಟನೆಯೊಂದರಿಂದಲೇ ಹುಟ್ಟಿಕೊಂಡಿರಬಹುದು. ಇಲ್ಲವೆ ಅದು ನಿಜವಾದ ಚರಿತ್ರೆಯನ್ನು ಒಳಗೊಂಡಿರಬಹುದು. ಆದರೆ ಯಾವತ್ತು ಅದರಲ್ಲೂ ಚರಿತ್ರೆಯೇ ಇರುತ್ತದೆ ಎಂದು ತಿಳಿಯುವುದು ತಪ್ಪಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಚರಿತ್ರೆ ಇರುತ್ತದೆ ಇಲ್ಲ, ಆದರೆ ಐತಿಹ್ಯ ಚರಿತ್ರೆಯ ಮೇಷವನ್ನು ಮಾತ್ರ ತಪ್ಪದೆ ಧರಿಸುತ್ತದೆ. ಹಲವು ಸಲ ಐತಿಹ್ಯಕ್ಕೂ ಪುರಾಣಕ್ಕೂ ಹೋಲಿಕೆಯಿರುತ್ತದೆ. ಹಲವಾರು ಸಂದರ್ಭಗಳಲ್ಲಿ ಐತಿಹ್ಯ ಮತ್ತು ಪುರಾಣಗಳ ನಡುವಿನ ಅಂತರ ತಿಳಿಯುವುದು ಕಷ್ಟವಾಗುತ್ತದೆಂದು ಜನಪದ ವಿದ್ವಾಂಸರು ತಮ್ಮ ಅಭಿಪ್ರಾಯಿಸಿದ್ದಾರೆ. ಕೆಲವು ಸಂದರ್ಭಗಳಲ್ಲಿ ಸಾಮಾನ್ಯ ಜನತೆಯು ಪುರಾಣವು ಚರಿತ್ರೆಯ ಒಂದು ಭಾಗವೆಂದು ಭಾವಿಸಿದ್ದಾರೆ ಆದರೆ ಐತಿಹ್ಯದ ಬಗೆಗೆ ಜನ 'ಸಾಮಾನ್ಯರಲ್ಲಿ ಈ ಧೋರಣ ಇರುವುದಿಲ್ಲ. ಆದ್ದರಿಂದ ಪುರಾಣ ಮತ್ತು ಐತಿಹ್ಯಗಳಲ್ಲಿರುವ ಪ್ರಮುಖ ವ್ಯತ್ಯಾಸ ಎನ್ನಬಹುದು. ಪುರಾಣಗಳ ದೀರ್ಘತೆ ಐತಿಹ್ಯಗಳಲ್ಲಿ ಇರುವುದಿಲ್ಲ.

ಐತಿಹ್ಯ ಹೆಚ್ಚಿನ ಸಂದರ್ಭಗಳಲ್ಲಿ ಒಂದು ಚಿಕ್ಕ ಕಥನವಾಗಿರುತ್ತದೆ. ನಂಬಿಕೆಗಳು, ಧಾರ್ಮಿಕ ಅಂಶಗಳು, ಆಚರಣೆಗಳು, ಮನೆಗಳು, ಸ್ಥಳೀಯ ನೈಸರ್ಗಿಕ ವೈಶಿಷ್ಟಗಳು ಚಾರಿತ್ರಿಕ ಘಟನೆಗಳು ಮುಂತಾದವು ಐತಿಹ್ಯ ಸೃಷ್ಟಿಗೆ ಮೂಲ ಪರಿಕರಗಳನ್ನು ಒದಗಿಸುತ್ತವೆ. ಕ್ರಿ.ಶ.ಸು ೧೫ನೆ ಶತಮಾನದ ಹರಪ್ಪನಹಳ್ಳಿ ಪಾಳೆಗಾರರ ಕಾಲವಧಿಯಲ್ಲಿ ನಿರ್ಮಾಣವಾದ ಸುಂದರ ದೇವಾಲಯವೇ ಬಂಡೇ ರಂಗನಾಥ ದೇವಾಲಯ. ದೇವಾಲಯವು ಮುಖದ್ವಾರ, ಪ್ರಾಂಗಣ ಸುಕವಾಸಿ(ಅಂತರಾಳ) ಗರ್ಭಗೃಹವನ್ನು ಒಳಗೊಂಡಿದೆ, ಗರ್ಭಗೃಹದಲ್ಲಿ ಕಲ್ಲು ಬಂಡೆಯ ಮೇಲೆ ಕೊರೆದಿರುವ ರಂಗನಾಥಸ್ವಾಮಿ ಮತ್ತು ಈಶ್ವರ ಮೂರ್ತಿಗಳಿವೆ. ಸುಂದರವಾಗಿ ಕೆತ್ತನೆಯಿಂದ ಕೂಡಿದ ಪ್ರವೇಶ ದ್ವಾರದ ಇಕ್ಕಲಗಳಲ್ಲಿ

ಶಂಖ, ಚಕ್ರ ಗಾದೆಗಳನ್ನು ಹಿಡಿದು ನಿಂತಿರುವ ದ್ವಾರ ಪಾಲಕರು ಶಿಲ್ಪಿಗಳಿವೆ. ಬಂಡೇ ರಂಗನಾಥ ದೇವಾಲಯದ ಸಭಾಮಂಟಪದ ವಾಸ್ತು ಶಿಲ್ಪಗಳನ್ನು ಗಮನಿಸಿದಾಗ ಇದರಲ್ಲಿ ನಾಲ್ಕು ಚೌಕಾರದ ಕಂಬಗಳು ಇವೆ ಪ್ರತಿ ಕಂಬಗಳಲ್ಲಿ ಆಳ್ವಾರ, ಲಜ್ಜಾಗೌರಿ. ಶಿಲ್ಪಗಳನ್ನು ಮನೋಹರವಾಗಿ ಕೆತ್ತಲಾಗಿದೆ. ಗರ್ಭಗೃಹದ ಮೇಲೆ ಪಂಚತಲಗಳಿಂದ ಕೂಡಿದ ದ್ರಾವಿಡ ಶೈಲಿಯ ವಿಮಾನ (ಗೋಪುರದ ಮೇಲ್ಭಾಗವಿದೆ. ಇಲ್ಲಿ ವಿಜಯ ನಗರ ಶೈಲಿಯನ್ನು ಗಮನಿಸಿದಾಗ ಗಟ್ಟಿಯಾದ ಶಿಲೆಯನ್ನು ಬಳಸಿಕೊಂಡು ಈ ದೇವಾಲಯವನ್ನು ನಿರ್ಮಿಸಲಾಗಿದೆ. ರಂಗನಾಥ ದೇವಾಲಯ ಮುಂಭಾಗದಲ್ಲಿ ದೀಪ ಸ್ತಂಭ ಮತ್ತು ಬಲಭಾಗದಲ್ಲಿ ಹೋಮಕುಂಡಗಳವೆ. ಈ ದೇವಾಲಯ ವಾಸ್ತು, ಶೈಲಿಯಲ್ಲಿ, ವಿಶಿಷ್ಟವಾಗಿದ್ದು, ಇಲ್ಲಿನ ಸಾಂಸ್ಕೃತಿಕ ಇತಿಹಾಸ ತಿಳಿಯಲು ಸಹಕಾರಿಯಾಗಿದೆ. ತಂಬ್ರಹಳ್ಳಿ ಈಶಾನ್ಯ ದಿಕ್ಕಿಗೆ ಹೊಂದಿಕೊಂಡು ಸುಮಾರು ಎರಡು ಮೈಲಿ ದೂರದಲ್ಲಿ ಒಂದು ಬೆಟ್ಟವಿದೆ. ಈ ಬೆಟ್ಟದ ದಕ್ಷಿಣ ದಿಕ್ಕಿಗೆ ಬಂಡಿಹಳ್ಳಿ ಎಂಬ ಸಣ್ಣ ಗ್ರಾಮ ಇತ್ತು ಈ ಗ್ರಾಮದಲ್ಲಿನ ಓಬಳ ನಾಯಕನೆಂಬ ಒಬ್ಬ ಪಾಳೆಯಗಾರನು ನಾಯಕನೆಂಬ ಒಬ್ಬ ಪಾಳಯಗಾರನಿದ್ದನು ಅವನು ಕೆಲವು ಹಸುಗಳನ್ನು ಸಾಕಿದ್ದನು, ಅವುಗಳ ಪಾಲನೆಗೆ ೧೨ ವರ್ಷದ ಒಬ್ಬ ಬಾಲಕನನ್ನು ನೇಮಿಸಿಕೊಂಡಿದ್ದನು. ಈ ಬಾಲಕನು ಪ್ರತಿದಿನ ಹಸುಗಳನ್ನು ಮೇಯಿಸಲು ಆ ಬೆಟ್ಟದ ಮೇಲೆ ಹೋಗುತ್ತಿದ್ದನು. ಒಂದು ದಿನ ಸಾಯಂಕಾಲ ಆ ಹಸುಗಳ ಗುಂಪಿನಲ್ಲಿದ್ದ ಜಯಲಕ್ಷ್ಮಿ ಎಂಬ ಹಸು ಬೆಟ್ಟದ ಮೇಲಿನ ಒಂದು ಭಾಗಕ್ಕೆ ಹೋಗಿ ಪೂರ್ವಾಭಿಮುಖಿವಾಗಿ ನಿಂತುಕೊಂಡು ತನ್ನ ಕೆಚ್ಚಲಿನಿಂದ ಹಾಲು ಸುರಿಸುತ್ತಿತ್ತು ಸುರಿದ ಹಾಲು ಒಂದು ಬಂಡೆಯ ಬಿರುಕಿನಲ್ಲಿ ಹೋಯಿತು. ತರುವಾಯ ಆ ಹಸು ವಾಪಸು ಬಂದು ತನ್ನ ಇತರ ಹಸುಗಳ ಗುಂಪಿನಲ್ಲಿ ಸೇರಿತು. ಬಾಲಕನು ಎಲ್ಲಾ ಹಸುಗಳನ್ನು ಹೊಡೆದುಕೊಂಡು ಬಂದು ಕೊಟ್ಟಿಗೆಯಲ್ಲಿ ಕಟ್ಟಿಹಾಕಿ ವಿಶಾಂತ್ರಿಗೆ ತೆರೆಳಿದನು. ರಾತ್ರಿ ಓಬಳನಾಯಕನ ಧರ್ಮ ಪತ್ನಿ ಒಂದೊಂದಾಗಿ ಹಸುಗಳ ಹಾಲು ಹಿಂಡುತ್ತಾ ಜಯಲಕ್ಷ್ಮಿಯ ಕರುವನ್ನು ಹಾಲು ಕುಡಿಯಲು ಅದರ ಹತ್ತಿರ ಬಿಜ್ಜಳ, ಆದರೆ ಜಯಲಕ್ಷ್ಮಿಯ ತನ್ನ ಕರುವಿಗೆ ಹಾಲು ಉಣಿಸಲಿಲ್ಲ. ಕರುವು ಸುಮ್ಮನೆ ನಿಂತಿರುವುದನ್ನು ಕಂಡು ಬೆರಗಾಗಿ ಈಕೆ ಜಯಲಕ್ಷ್ಮಿಯ ಕೆಚ್ಚಲಿಗೆ ಕೈ ಹಾಕಿ ಹಿಂಡಲು ಮುಂದಾದಳು. ಆದರೆ ಆ ಹಸುವಿನ ಕೆಚ್ಚಲುನಿಂದ ಒಂದು ಹನಿ ಹಾಲು ಬರಲಿಲ್ಲ, ಗಾಬರಿಯಿಂದ ಕೂಡಲೆ ಹಸುಗಳನ್ನು ಮೇಯಿಸುವ ಬಾಲಕನನ್ನು ಕರೆದು ಜಯಲಕ್ಷ್ಮಿ ಈ ದಿನ ಹಾಲು ಕರೆಯಲಿಲ್ಲ ತನ್ನ ಕರುವಿಗೂ ಉಣ್ಣಿಸಲಿಲ್ಲ. ಹಸು ಮನೆಗೆ ಬಂದ ಕೂಡಲೇ ತನ್ನ ಕರುವಿಗೆ ಹಾಲು ಉಣ್ಣಿಸಿದಂತೆ ಕಾಣುತ್ತದೆ. ನೀನು ಹಿಂದೆಯೇ ಬಂದು ನೋಡದೇ ನಂತರ ಬಂದು ಇದನ್ನು ಅದರ ಸ್ಥಳದಲ್ಲಿ ಕಟ್ಟಿಹಾಕಿರುವೆ. ಇಷ್ಟು ಬೇಜವಾಬ್ದಾರಿಯಿಂದ ಇರುವ ನಿನಗೆ ಊಟ ಹಾಕುವುದಿಲ್ಲ ಎಂದು ಸಿಟ್ಟುಗೊಂಡಳು. ಆ ಬಾಲಕನು ಅಮ್ಮ ನಾನು ಸರಿಯಾಗಿ ನೋಡಿ ಅದರ ಸ್ಥಳದಲ್ಲಿ ಕಟ್ಟಿಹಾಕಿರುವೆನು ಅದು ಕರುವನ್ನು ತನ್ನ ಬಳ್ಳಿ ಕೂಡಿಸಿಕೊಂಡಿಲ್ಲ ಎಂದು ಹೇಳಿದನು. ಆಗ ಆಕೆ

ಈ ದಿನ ನಿನ್ನನ್ನು ಕ್ಷಮಿಸಿದ್ದೇನೆ ಇನ್ನು ಮುಂದೆ ಸರಿಯಾಗಿ ನೋಡಿಕೋ ಎಂದು ಹೇಳಿ ಅಡುಗೆ ಮನೆಗೆ ಹೋದಳು. ಮರುದಿನ ಎಂದಿನಂತೆ ಹಸುಗಳನ್ನು ಹೊಡೆದುಕೊಂಡು ಹೋದ ಬಾಲಕನು ಅವುಗಳನ್ನು ಮೇಯಲು ಬೆಟ್ಟದಲ್ಲಿ ಬಿಟ್ಟನು. ಜೊತೆಗೆ ಜಯಲಕ್ಷ್ಮಿಯ ಮೇಲೆ ಬಹಳ ಎಚ್ಚರಿಕೆಯಿಂದ ಕಣ್ಣಿಟ್ಟನು ಸಾಯಂಕಾಲವಾಗುತ್ತಾ ಬಂದಾಗ ಆ ಹಸು ಇತರ ಹಸುಗಳಿಂದ ಅಗಲಿ ಬೆಟ್ಟದ ಮೇಲೆ ಹೊಗತೊಡಗಿತು. ಬಾಲಕನು ಅದು ಎಲ್ಲಿಗೆ ಹೋಗುತ್ತದೆಯೋ ನೋಡೋಣ ಎಂದು ಮರೆಯಿಂದ ಅದನ್ನು ಹಿಂಬಾಲಿಸಿದನು. ಸೂರ್ಯನು ಈ ಲೋಕವನ್ನು ಬಿಟ್ಟು ಹೋಗುವಂತೆ ತನ್ನ ಕೆಂಬಣ್ಣದ ಕಿರಣಗಳನ್ನು ಸೂಸುತ್ತಾ ಬೆಟ್ಟದ ಹಿಂಬದಿಗೆ ಸರಿಯುವ ಇಳಿಹೊತ್ತು ಆದಾಗಿತ್ತು.

ಸೂರ್ಯಸ್ತಾಮಾನಕ್ಕೆ ಸರಿಯಾಗಿ ಜಯಲಕ್ಷ್ಮಿಯು ತನ್ನ ಕಮಲದಂತಂಹ ಕಣ್ಣುಗಳನ್ನು ಅರಳಿಸಿ ನಾಲ್ಕು ದಿಕ್ಕುಗಳನ್ನು ನೋಡಿ ತನ್ನ ಇತರ ಹಸುಗಳನ್ನು ಅಗಲಿ ಹಿಂದಿನ ದಿನ ಹಾಲು ಕರೆದ ಸ್ಥಳಕ್ಕೆ ಹೊಯಿತು. ಮರೆಯಲ್ಲಿ ನಿಂತು ನೋಡುತ್ತಿದ್ದ ಬಾಲಕನು ಆಶ್ಚರ್ಯದಿಂದ ಮುಂದೇನು ಜರುಗುವುದೆಂದು ಅಲ್ಲಿಯೇ ನಿಂತು ನೋಡತೊಡಗಿದನು. ಹಸುವು ಪೂರ್ವಾಭಿಮುಖವಾಗಿ ನಿಂತು ತಾನು ಕೆಚ್ಚಲಿನಿಂದ ಹಾಲನ್ನು ಸುರಿಸಿ ನಂತರ ಹಸುಗಳ ಹಿಂಡನ್ನು ಸೇರಿಕೊಂಡಿತು. ಇದನ್ನೆಲ್ಲಾ ಮರೆಯಲ್ಲಿ ನಿಂತು ನೋಡುತ್ತಿದ್ದ ಬಾಲಕನು ಆ ಸ್ಥಳಕ್ಕೆ ಹೊಗೀನೋಡಿದಾಗ ಅಲ್ಲಿ ಒಂದು ಹನಿಯೂ ಹಾಲಿರಲ್ಲಿಲ್ಲ. ಒಂದು ಮೊಳುದ್ದಾದ ಉಗುರು ದಳದೆ ದಪ್ಪದೆ ಬಂದು ಬಿರುಕು ತೆಂಗಿನಕಾಯಿಯು ಹನಿ ಬಿಟ್ಟಂತಹ ಗುರುತಿತ್ತು. ಇದನ್ನು ಕಂಡು ಬೆರಗಾಗಿ ಬಾಲಕನು ಎಲ್ಲಾ ಹಸುಗಳನ್ನು ಹೊಡೆದುಕೊಂಡು ಮನೆಗೆ ಬಂದು ಬಹಳ ಹೆದರಿಕೆಯಿಂದ ಆ ಹಸುವನ್ನು ಮೊದಲು ಕಟ್ಟಿದನು. ಆ ಮೇಲೆ ಉಳಿದ ಹಸುಗಳನ್ನು ಕಟ್ಟಿ ಜಯಲಕ್ಷ್ಮಿಯು ಬೆಟ್ಟದಲ್ಲಿ ಹಾಲು ಸುರಿಸಿ ಬಂದ ಬಗ್ಗೆ ಯೋಚಿಸುತ್ತಾ ಕುಳಿತನು. ಎಂದಿನಂತೆ ಹಾಲು ಕರೆಯಲು ಬಂದ ನಾಯಕನ ಮಡದಿಯು ಒಂದೊಂದು ಹಸುವನ್ನು ಕರೆಯುತ್ತಾ ಜಯಲಕ್ಷ್ಮಿಯ ಬಳಿ ಬಂದಳು. ನಂತರ ಅದರ ಕರುವನ್ನು ಹಾಲು ಹೀರಲು ಬಿಟ್ಟಳು. ಆದರೆ ಮತ್ತೇ ಆ ಕರುವಿಗೆ ಹಾಲುಸಿಗಲಿಲ್ಲ. ಇದನ್ನು ನೋಡಿದ ಆಕೆ ಹಸುವಿನ ಹಾಲನ್ನು ಕರೆದರೆ ಗೊತ್ತಾಗುತ್ತದೆಂದು ಕೆಚ್ಚಲಿಗೆ ಕೈಹಾಕಿ ಕರೆಯಲು ಮುಂದಾದಳು ಆಗಲೂ ಕೂಡಾ ಒಂದು ಹನಿ ಹಾಲು ಬರಲಿಲ್ಲ. ಇದರಿಂದ ಕೋಪಗೊಂಡ ಆಕೆ ಯಾಕೆ ಈ ಹಸು ಈಗಲೂ ಹಾಲು ಕೊಡಲಿಲ್ಲ? ಎಂದು ನಿನ್ನೆಯೇ ಕರುವನ್ನು ಸರಿಯಾಗಿ ಕಟ್ಟು ಎಂದು ನಿನಗೆ ಹೇಳಿರಲಿಲ್ಲವೇ? ಎಂದು ಬಾಲಕನನ್ನು ಹೊಡೆಯಲೂ ಹೋದಳು. ಬಾಲಕನು ಗಾಬರಿಯಿಂದ ಅಮ್ಮ ಹೊಡೆಯ ಬೇಡಿ ನಿಜ ಸಂಗತಿಯನ್ನು ಹೇಳುತ್ತೇನೆ ಎಂದು ಬೆಟ್ಟದ ಮೇಲೆ ನಡೆದ ಸಂಗತಿಯನ್ನು ವಿವರಿಸಿದನು. ಈ ವಿಷಯವನ್ನು ಕೇಳಿದ ಆಕೆಯು ಇದನ್ನು ತನ್ನ ಪತಿಯ ಮುಂದೆ ವಿವರಿಸಿದಳು. ಆಗ ಓಬಳನಾಯಕನು ಆಶ್ಚರ್ಯಪಟ್ಟನು ಅಲ್ಲದೇ ಇದರಲ್ಲಿ ಏನೋ ಚಮತ್ಕಾರವಿದೆ ಎಂದು ಯೋಚಿಸುತ್ತಾ ಇದೇನೆಂಬುದನ್ನು ತಿಳಿದುಕೊಳ್ಳಬೇಕೆಂದು ನಿರ್ಧರಿಸಿದನ್ನು

ನಂತರ ಸ್ನಾನ ಮಾಡಿ ಒಂದೇ ಮನಸ್ಸಿನಿಂದ ದೇವರ ಪೂಜೆಯನ್ನು ಕೈಗೊಂಡು ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಮುಂದೆ ಒಂದು ಲೋಟ ಹಾಲನ್ನು ಕುಡಿದು ಹಾಸಿಗೆಯ ಮೇಲೆ ಕುಳಿತು ಧ್ಯಾನ ಮಾಡಿದನು. ನಿದ್ರಾವಶನಾದ ಬೆಳಗಿನ ಜಾವ ಸುಮಾರು ನಾಲ್ಕು ಗಂಟೆ ಸಮಯಕ್ಕೆ ಆ ನಾಯಕನ ಸ್ವಪ್ನದಲ್ಲಿ ಒಬ್ಬ ವೃದ್ಧ ಬ್ರಾಹ್ಮಣನು ಕಾಣಿಸಿಕೊಂಡು ಯಾಕೆ ನಾಯಕ? ನೀನು ಬಹಳ ಯೋಚನಾ ಪರಚಶನಾಗಿರುವೆ? ನಿನ್ನ ಯೋಚನೆಗೆ ಕಾರಣವೇನು? ಎಂದು ಕೇಳಿದನು. ಆಗ ನಾಯಕನು ಬ್ರಾಹ್ಮಣನಿಗೆ ನಮಸ್ಕಾರ ಮಾಡಿ ಸ್ವಾಮಿ ಈ ಎರಡು ದಿನಗಳಿಂದ ತಮ್ಮ ಪ್ರೀತಿಯ ಹಸುವು ಬೆಟ್ಟದ ಮೇಲ್ಭಾಗದ ಬಂಡೆಯ ಬಿರುಕಿನಲ್ಲಿ ಹಾಲನ್ನು ಸುರಿಸಿ ಮನಗೆ ಬರುತ್ತದೆ. ಇದಕ್ಕೆ ಕಾರಣವೆನೆಂದು ತಿಳಿಯದೇ ಯೋಚನೆ ಪರವಶನಾಗಿದ್ದೇನೆ. ಇದೇನು ಎಂಬುದನ್ನು ತಿಳಿಸಬೇಕೆಂದು ಬೇಡುತ್ತೇನೆ ಎಂದನು. ಆಗ ಬ್ರಾಹ್ಮಣನು ಇದು ಸಾಮಾನ್ಯ ವಿಷಯವಲ್ಲ ನಾಯಕ ಪ್ರಪಂಚದಲ್ಲಿ ನನ್ನಿಂದ ಮಹಾತ್ಕಾರ್ಯವಾಗ ಬೇಕಾಗಿದೆ ನಾಳೆಯ ದಿನ ನೀನು ಪ್ರತಃ ಕಾಲದಲ್ಲಿ ಎದ್ದು ಸ್ನಾನ ಮುಗಿಸಿ ದೇವತಾರ್ಚನೆ ಮಾಡಿ ಇಡೀ ದಿನ ಉಪವಾಸ ವ್ರತವನ್ನು ಆಚರಿಸಬೇಕು. ರಾತ್ರಿ ಮಲಗುವಾಗ ನಿನ್ನ ಹಾಸಿಗೆಯ ಮಗ್ಗಲಲ್ಲಿ ಬಂದು ಬಳ್ಳಿಯ ಕಾಗದ ಮತ್ತು ಬಂದು ಲೇವಿಯನ್ನು ಇಟ್ಟುಕೊಂಡು ದೇವರ ಧ್ಯಾನ ಮಾಡು ಬೆಳಗಿನ ಜಾವ ಸ್ವಪ್ನದಲ್ಲಿ ನಿನ್ನ ಕುಲಸ್ವಾಮಿಯು ಪ್ರತ್ಯಕ್ಷವಾಗಿ ಎಲ್ಲಾ ವಿಷಯವನ್ನು ಅದರಂತೆ ನಡೆಯಬೇಕು. ನೀನು ಆ ವೇಳೆಯಲ್ಲಿ ಬರೆದುಕೊಳ್ಳುವ ಮನೋಶಕ್ತಿಯನ್ನು ನಿನ್ನೆ ಕುಲಸ್ವಾಮಿಯೇ ನಿನಗೆ ದೆಯಪಾಲಿಸುತ್ತಾನೆ ಯೋಚಿಸಬೇಡ ಎಂದು ಹೇಳಿ ಬ್ರಾಹ್ಮಣನು ಕಣ್ಮರೆಯಾದನು. ಕೂಡಲೆ ಎಚ್ಚೆತ್ತು ನಾಯಕನು ತನ್ನ ಕುಲಸ್ವಾಮಿಯನ್ನ ಧ್ಯಾನಿಸುತ್ತಾ ಎದ್ದು ತನ್ನ ಪತ್ನಿಗೆ ಈ ವಿಷಯ ತಿಳಿಸಿದನು. ಆಶ್ಚರ್ಯ ಮತ್ತು ಸಂತೋಷದಿಂದ ಪತಿಯ ಮುಖ ನೋಡುತ್ತಾ ಆಗಲಿ ಸ್ವಾಮಿ ಎಲ್ಲ ಆ ದೇವರ ಇಚ್ಚೆ ಎಂದಳ ಅಲ್ಲದೇ ತನ್ನ ಪತಿಯ ಸ್ನಾನ ಮತ್ತು ಪೂಜೆಗೆ ಹಣಿ ಮಾಡಿದಳು ನಾಯಕನು ಸ್ನಾನ ಪ್ರಜೆ ಮಾಡಿ ಧ್ಯಾನಾಸಕ್ತನಾದನು ಮಧ್ಯಾಹ್ನದ ವೇಳೆಗೆ ಹಾಲು ಹಣ್ಣುಗಳನ್ನು ಸೇವಿಸಿದನು. ರಾತ್ರಿಯಾಗುತ್ತಲೆ ನಾಯಕನು ಪುನಃಸ್ನಾನ ಮಾಡಿ ದೇವರ ಆರ್ಚನೆ ಮಾಡಿ ಸ್ವಪ್ನದಲ್ಲಿ ವೃದ್ಧ ಬ್ರಾಹ್ಮಣನು ತಿಳಿಸಿದಂತೆ ತನ್ನ ಹಾಸಿಗೆಯ ಪಕ್ಕದಲ್ಲಿ ಬಿಳಿ ಹಾಳೆ, ಲೇಖನಿಯನ್ನು ಇಟ್ಟುಕೊಂಡು ಧ್ಯಾನಾಸಕ್ತನಾದನು ಕ್ರಮೇಣ ಅವನಿಗೆ ನಿದ್ರಾದೇವತೆಯು ಆವರಿಸಿದಳು ಬೆಳಗಿನ ಜಾವ ಸುಮಾರು ನಾಲ್ಕು ಘಂಟೆ ವೇಳೆಗೆ ಎಚ್ಚರವಾಗಿ ಆತ ಕಣ್ಣತೆರದು ನೋಡಲು ಎದುರಿಗೆ ತಮ್ಮ ಕುಲಸ್ವಾಮಿಯಾದ ವೆಂಕಟಾಚಲಪತಿಯು ಶಂಕ, ಚಕ್ರ, ಪದ್ಮದಾರಿಯಗಿ ನಿಂತುಕೊಂಡಿದ್ದನು. ಅಸನ್ಮಖಿಯಾಗಿ ಎಲೈ ಭಕ್ತ ಏಳು ಎದ್ದೇಳು ನಾನು ನಿನಗಾಗಿ ಈ ಗ್ರಾಮಕ್ಕೆ ಬಂದಿರುವೆ ಎಲ್ಲಿಯೂ ಸರಿಯಾದ ಸ್ಥಳವಿಲ್ಲದೇ ಈ ಬೆಟ್ಟದ ಮೇಲ್ಭಾಗದ ಕಲ್ಲು ಪಡೆಕಿನಲ್ಲಿ ವಾಸವಾಗಿದ್ದೇನೆ, ನಿನ್ನ ಜಯಲಕ್ಷ್ಮಿ ಹಸು ತನ್ನ ಕರುವಿಗೂ ನಿಮಗೂ ಹಾಲು ಇಲ್ಲದಂತೆ ಮಾಡಿ ನಿತ್ಯವೂ ನಮಗೆ ಹಾಲು ಉಣ್ಣಿಸುತ್ತಿದ್ದಾಳೆ.

ಆ ಹಸು ಸರ್ವರನ್ನು ರಕ್ಷಿಸುವ ತಾಯಿ ಅನ್ನಪೂರ್ಣಿಯಾಗಿದ್ದಾಳೆ ಅದನ್ನು ನೀನು ಪ್ರೀತಿ-ವಿಶ್ವಾಸದಿಂದ ರಕ್ಷಿಸುತ್ತಾ ಇರುವುದರಿಂದ ನಾನು ನಿರ್ಧರಿಸಿದ್ದೇನೆ ನೀನು ಇನ್ನು ಬಂದು ಮಾಸದೊಳಗಾಗಿ ನನ್ನನ್ನು ಬಯಲಿಗೆ ಬರುವಂತೆ ಬಂಡೆಯಿಂದ ತೆಗೆಯಿಸಿ ಒಂದು ಗುಡಿಯನ್ನು ಕಟ್ಟಿಸಿ ಇದು ನಿನ್ನಿಂದಲೇ ಆಗ ಬೇಕಾದ ಕೆಲಸ ನಾಳೆಯಿಂದಲೇ ಕೆಲಸ ಪ್ರಾರಂಭಿಸು. ನಾನಿರುವ ಜಾಗದ ಬಂಡೆಯನ್ನು ಒಡೆಸಿ ನನ್ನ ಸುತ್ತಲೂ ಇರುವ ಕಲ್ಲನ್ನು ತೆಗೆದರೆ ನಾನು ಅಲ್ಲಿ ಮಲಗಿದಂತೆ ಇರುತ್ತಾನೆ. ನಾನಿರುವ ಸ್ಥಳದಿಂದ ತುಸುದೂರು ದಕ್ಷಿಣಕ್ಕೆ ಒಂದು ಹೊಂಡವನ್ನು ಕಡಿಸು ಅದರಲ್ಲಿ ಉತ್ತಮ ಜಲಬರುವುದು. ನೀನು ಈ ಬಗ್ಗೆ ಯೋಚಿಸಬೇಡ ನಿನಗೆ ಎಲ್ಲಾ ವಿಧದಿಂದಲು ಸಹಾಯ ಸಿಗುತ್ತದೆ ಎಂದು ಹೇಳಿ ಅಮೂರ್ತಗೊಂಡನು ನಾಯಕನು ಸ್ವಾಮಿಗೆ ಮನದಲ್ಲಿಯೇ ಹೊಂದಿಸಿ ಎದ್ದು ಸ್ನಾನ ಪೂಜೆಯನ್ನು ಮುಗಿಸಿದನು, ನಂತರ ತನ್ನ ಸಭಾ ಮಂಟಪಕ್ಕೆ ಬಂದು ತನ್ನ ಹಿತಚಿಂತಕರನ್ನು ಕರೆಯಿಸಿ ಸ್ವಪ್ನ ವೃತ್ತಾಂಶವನ್ನು ತಿಳಿಸಿದನು, ಇದರಿಂದ ಸರ್ವರು ಸಂತೋಷ ಪಟ್ಟರು ಮುಂದಿನ ಕಾರ್ಯಕ್ಕೆ ವರ್ಷಾ ಮಾಡಲು ಕೂಲಿ ಆಳುಗಳನ್ನು ವಡ್ಡರನ್ನು ಕರೆತರಲು ಸೇವಕರನ್ನು ಕಳುಹಿಸಿದನು. ಇದಕ್ಕಾಗಿ ಕೆಲವು ದಿನಗಳವರೆಗೆ ಸೇವಕರು ಸುತ್ತಾಡಿದರು ಎಲ್ಲಿಯೂ ಕೂಲಿಯವರೂ ವಡ್ಡರೂ ಸಿಗದಿದ್ದುದ್ದರಿಂದ ವಾಪಸ್ಸು ಬಂದು ನಾಯಕನಿಗೆ ಸುದ್ದಿ ತಿಳಿಸಿದರು. ನಾಯಕನು ಮುಂದೇನು? ಮಾಡುವುದೆಂದು ಯೋಚಿಸುತ್ತಾ ಕುಳಿತಾಗ ನಾಯಕನ ಪತ್ನಿಯು ಬಂದು ಪತಿಯನ್ನು ಕುರಿತು ಸ್ವಾಮಿ ನೀವು ಹೀಗೆ ಸುಮ್ಮನೆ ಚಿಂತಿಸುತ್ತಾ ಕುಳಿತರೇ ಹೇಗೆ? ನಮ್ಮ ಕುಲ ದೇವರನ್ನು ಮೊರೆ ಹೊಕ್ಕರೆ ಆತನೇ ಈ ಕೆಲಸಕ್ಕೆ ದಾರಿ ತೋರಿಸುತ್ತಾನೆ ಎಂದು ಹೇಳಿದಳು. ಆಗ ನಾಯಕನು ಅದಕ್ಕೆ ಸಮ್ಮತಿಸಿ ಎದ್ದು ಹೋಗಿ ಸ್ನಾನ ಮಾಡಿ ಪೂಜೆ ಮುಗಿಸಿ ಆತನೆ ನಾಮಸ್ಮರಣೆ ಮಾಡುತ್ತಾ ಹಾಸಿಗೆಯಲ್ಲಿ ಕುಳಿತನು. ಅಂದು ನಾಯಕನಿಗೆ ಬೆಳಗಿನ ಜಾವ ಸ್ವಪ್ನದಲ್ಲಿ ಕುಲದೇವರಾದೆ ವೆಂಕಟಾಚಲಪತಿ ದರ್ಶನ ನೀಡಿ ಭಕ್ತ ನಿನ್ನ ಚಿಂತಗೆ ಕಾರಣ ನನಗೆ ತಿಳಿದಿದೆ ವೃದ್ಧ ಚಿಂತಿಸಬೇಡ ಬೆಳ್ಳಗೆ ನೀನೆ ಖುದ್ದಾಗಿ ಇಲ್ಲಿಂದ ಆಗ್ನೇಯ ದಿಕ್ಕಿಗೆ ಪ್ರಯಾಣ ಪಾಳೆಯಗಾರನ್ನು ಕಂಡು ಎಲ್ಲಾ ವಿಷಯ ತಿಳಿಸು. ಎಂಬ ಸ್ವಾಮಿಯನ್ನು ಕೂಂಡಾಡುತ್ತಾ ಸ್ನಾನ ದೇವತಾರ್ಚನೆ ಮತ್ತು ಉಪಹಾರಗಳನ್ನು ಮುಗಿಸಿ ಕೇಲವು ಸೇವಕರನ್ನು ಮಿತ್ರರನ್ನು ಕರೆದುಕೊಂಡು ಜರಿಮಲೆಗೆ ಪ್ರಯಾಣ ಮಾಡಿದನ್ನು ಅಲ್ಲಿಯ ಪಾಳೆಯಗಾರನ್ನು ಕಂಡು ಎಲ್ಲಾ ವಿಷಯಗಳನ್ನು ತಿಳಿಸಿದನ್ನು ಆಗ ಜರಿಮಲೆ ನಾಯಕನು ಸಂತೋಷದಿಂದ ಒಪ್ಪಿ ಜನ ಧನ ಸಹಾಯ ಮಾಡಿದನು. ಜೊತೆಗೆ ಊಟೋಪಚರಗಳನ್ನು ಮಾಡಿಸಿ ಕಳುಹಿಸಿಕೊಟ್ಟನು. ನಾಯಕನು ಸುಮಾರು ಏಳುಂಟುನೂರು ಕೆಲಸಗಾರನ್ನು ವಡ್ಡರನ್ನು ಕರೆದುಕೊಂಡು ಊರಿಗೆ ಹಿಂದಿರುಗಿದನು. ಬಂದು ಶುಭ ಮೂಹುರ್ತದಲ್ಲಿ ಗಡ್ಡೆವನ್ನು ಕೆಡಿಸಲು ಹಾಗೂ ಹೊಂಡವನ್ನು ತೋಡಿಸಲು ಪ್ರಾರಂಭಿಸಿದನು. ಇಡೀ ವಾರವೆಲ್ಲಾ ಕೆಲಸ ಮಾಡಿದರು ಸ್ವಾಮಿ ಮಾತ್ರ ಎಲ್ಲಿಯೂ ಕಾಣಿಸಲಿಲ್ಲ. ವಡ್ಡರು ಹಾಗೂ ನಾಯಕರು ನಿರಾಶರಾದರು. ಹೊಂಡದ ಕೆಲಸ ಮುಗಿದು ಜಲಿ

ಉದ್ಭವವಾಯಿತು, ನೀರಿನಿಂದ ತುಂಬಿ ತುಳಿಕಿದ ಹೊಂಡವನ್ನು ಕಂಡು ಎಲ್ಲರು ಸಂತೋಷ ಪಟ್ಟರು. ತನ್ನ ಸ್ವಾಮಿಯೂ ಬಯಲಿಗೆ ಬಾರದೇ ಇದ್ದುದರಿಂದ ನಾಯಕನು ಎಲ್ಲಾರನ್ನು ಹುರುವುಗೊಳಿಸಿ ತಾನೇ ಕುದ್ದಾಗಿ ಎದುರಿಗೆ ನಿಂತು ಗುಡ್ಡವನ್ನು ಹೊಡೆಯಿಸಿದನು ಹೀಗೆ ಹೊಡೆಯುವಾಗ ಒಂದು ಬಂಡೆಯ ಸಂದಿನಲ್ಲಿ ಹಾಕಿದ ಹಾಕಿಯ ಹಿಬ್ಬದ ಗುಂಟು ರಕ್ತವು ಚೆಲ್ ಎಂದು ಹೊರಗೆ ಚಿಮ್ಮಿತು, ಅದನ್ನು ಕಂಡು ನಾಯಕರನಾದಿಯಾಗಿ ಎಲ್ಲರರು ಗಾಬರಿಗೊಂಡು ನಾಯಕನ್ನು ಕೂಡಲೇ ಎಲ್ಲಾರೂ ಕೆಲಸವನ್ನು ಬಿಟ್ಟು ಹೊಂಡಕ್ಕೆ ಹೋಗಿ ಸ್ನಾನ ಮಾಡಿ, ಊಟ ಮುಗಿಸಿ ಸ್ವಾಮಿಯ ಸಾಮಿಯು ರ್ಧಯಾನ ಮಾಡುತ್ತಾ ವಿಶ್ರಾಂತಿ ಪಡೆಯಿರಿ ಎಂದು ಅಪ್ಪಣೆ ಮಾಡಿ ತಾನು ತನ್ನ ಸ್ವಗೃಹಕ್ಕೆ ತೆರಳಿದನು. ರಾತ್ರಿಯಾಗುತ್ತಲೇ ನಾಯಕನು ಸ್ನಾನ ಮಾಡಿ ಪೂಜೆ ಮುಗಿಸಿ ಹಾಲು ಹಣ್ಣುಗಳು ಉಪಹಾರ ಮುಗಿಸಿಕೊಂಡು ಧ್ಯಾನಾಸಕ್ತರಾದರು. ಎಷ್ಟೋ ಹೊತ್ತಿನ ನಂತರ ಇವರಿಗೆ ನಿದ್ರೆ ಆವರಿಸಿತು ಬೆಳಗಿನ ಜಾವದಲ್ಲಿ ನಾಯಕನಿಗೆ ಸ್ವಾಮಿಯು ಸ್ವಪ್ನದಲ್ಲಿ ಕಾಣಿಸಿಕೊಂಡು ಓಬಳನಾಯಕ ಏಕೆ? ನೀನು ಕಾರ್ಯವನ್ನು ನಿಲ್ಲಿಸಿ ಬಿಟ್ಟೆ ಎಂದಾಂತಾಗಲು ನಾಯಕನು ಎದುರಿಗೆ ನಿಂತಿದ್ದು ಸ್ವಾಮಿಯನ್ನು ಕಂಡು ಶಿರಕಷ್ಟಾಂಗ ನಮಸ್ಕಾರ ಮಾಡಿದಾಗ ಸ್ವಾಮಿಯ ತುದಿಯಾಗು ಗಾಯದಿಂದ ಕುಡಿ ಸ್ವಲ್ಪ ಮುಂದಾಗಿತ್ತು. ಆಗ ನಾಯಕನು ಸ್ವಾಮಿ ಇದೇನು ರಕ್ತ ಎಂದು ಕೇಳಿದಾಗದ ನಾಯಕ ನಿನ್ನ ವಡ್ಡರು ಕಲ್ಲನ್ನು ಕೇಳಲು ಎತ್ತಿ ಹಾಕಿದಾಗ ಹಾರೆಯ ತುದಿಯ ಮೂಗಿಗೆ ಬಡಿದು ಗಾಯವಾಗಿ ರಕ್ತ ಸೋರಿದೆ ಎಂದು ಹೇಳಿದ. ಸ್ವಾಮಿಯ ಮಾತನ್ನು ಕೇಳಿ ನಾಯಕನು ಗಾಬರಿಗೊಳಗಾದನು. ತಕ್ಷಣ ನಡುಗುತ್ತಾ ಸ್ವಾಮಿ ನಾವು ಮಹಾಪಪಿಗಳು ತಿಳಿಯದೇ ನಮ್ಮಿಂದ ಈ ಕಾರ್ಯ ಜರುಗಿದೆ. ನಮ್ಮೆಲ್ಲರ ಸರ್ವ ಅಪರಾಧವನ್ನು ಮನ್ನಿಸಬೇಕೆಂದು ಸ್ವಾಮಿಯ ಪಾದಗಳಿಗೆ ಬಿದ್ದು ರೂಪಿಸಿದನು, ಆಗ ಸ್ವಾಮಿಯು ನಾಯಕ ಇದರಲ್ಲಿ ನಿಮ್ಮಗಳ ತಪ್ಪೇನು ಇಲ್ಲ ಈ ಕಲಿಯುಗದಲ್ಲಿ ಅನೇಕ ಕಡೆಗಳಲ್ಲಿ ಅಗಾಗೇ ಅನೇಕರಿಗೆ ಗಾಯಗಾಳಾಗಿ ಅಂಗಹೀನರಾಗಿ ರಕ್ತವು ಭೂಮಿಯ ಮೇಲೆ ಹರಿಯುತ್ತಿರುವ ಮುನ್ಸೂಚನೆಯೇ ನನ್ನ ಮೂಗಿನ ರಕ್ತವಾಗಿದೆ. ಅದಕ್ಕಾಗಿ ನೀನು ಭಯಪಡುವ ಕಾರಣವಿಲ್ಲ ನಾಳೆ ನೀನು ರಕ್ತ ಚಿಮ್ಮಿದ ಸ್ಥಳವನ್ನು ಬಿಟ್ಟು ಪೂರ್ವ ಮತ್ತು ಪಶ್ಚಿಮ ಹಾಗೂ ದಕ್ಷಿಣ ದಿಕ್ಕಿನ ಬಂಡೆಗಳನ್ನು ಕಡಿಸು ಒಂದು ಮೊಳದಷ್ಟು ಕಡಿದಾಗ ಮಲಗಿದಂತೆ ಇರುವ ನನ್ನ ಆಕೃತಿಯ ಬಂಡೆಯ ಮೇಲೆ ಕಂಡುಬರುತ್ತದೆ, ಕೈಗಳಲ್ಲಿ ಬಿಲ್ಲೂ ಬಾಣಗಳೂ ಕಾಣಿಸುತ್ತವೆ, ನನ್ನ ಮೂಗು ಮಾತ್ರ ತುಸು ಮಂಡದಂತೆ ಕಾಣುತ್ತದೆ. ನನ್ನ ಆಕೃತಿ ಬೆಳೆದಂತೆಲ್ಲಾ ಅದು ಸರಿಯಾಗುತ್ತದೆ. ಈಶಾನ್ಯ ದಿಕ್ಕಿನಲ್ಲಿ ಒಂದು ಮೊಳ ದೂರದಲ್ಲಿ ಕೈಲಾಸ ವಾಸಿಯಾದ ಗೌರಿಶಂಕರನು ನನ್ನೊಂದಿಗೆ ಉದ್ಭವವಾಗಿತ್ತಾನೆ. ಈ ಸ್ಥಳವು ಮುಂದೆ ಕಾಲಾನುಕ್ರಮದಲ್ಲಿ ದಕ್ಷಿಣಕಾಶಿ ಎಂದೆನಿಸುತ್ತದೆ. ತಿರುಪತಿಯಲ್ಲಿರುವ ವೆಂಕಟಾಚಲಪತಿಯಿಂದ ನಾನು ಇಲ್ಲಿ ಬಂಡೆ ರಂಗನಾಥನಾಗಿ ಕಾಶಿ ವಿಶ್ವನಾಥನ ರೂಪದಲ್ಲಿ ಈಶ್ವರನಾಗಿಯೂ ಕಾಣಿಸಿಕೊಳ್ಳುತ್ತೇನೆ. ಸರ್ವಭಕ್ತರ ಉದ್ಧಾರಕ್ಕಾಗಿಯೇ ನಾನು ಇಲ್ಲಿ ನೆಲಸಲು

ಬಂದಿದ್ದೇನೆ. ಈ ನನ್ನ ಕಾರ್ಯವನ್ನು ಪೂರ್ತಿಗೊಳಿಸಿದ ನಂತರ ನೀವು ಲೇಲಕಾಲ ಸುಖವಾಗಿದ್ದು ನಂತರ ದಂಪತಿ ಸಮೇತ ನೀವು ಮುಕ್ತಿಯನ್ನು ಪಡೆದು ನನ್ನ ಸನ್ನಿಧಿಯಲ್ಲಿ ಸೇರುವಿರಿ ಎಂದು ಹೇಳಿ ಸ್ವಾಮಿಯ ಅಮೂರ್ತನಾದನು. ಮರುದಿನ ನಾಯಕನು ಎಂದಿನಂತೆ ಸ್ನಾನ, ದೇವತಾಚರಣೆ ಮಾಡಿ ಉಪಹಾರದ ನಂತರ ಆಳುಗಳೊಂದಿಗೆ ಬೆಟ್ಟಕ್ಕೆ ಹೋಗಿ ಪೂಜಿಸಿ ಸ್ವಾಮಿಗಳ ಅಪ್ಪಣೆಯಂತೆ ಬಂಡೆಯನ್ನು ತೆಗೆಯಿಸಿದನು ಆಗ ಸ್ವಾಮಿಯು ಬಿಲ್ಲು ಬಾಣಗಳೊಂದಿಗೆ ಮಲಗಿದ ರೂಪದಲ್ಲಿ ಇದ್ದದ್ದು ಗೋಚರವಾಯಿತು. ಎಲ್ಲರನ್ನೂ ಸಂತೋಷದಿಂದ ಲಕ್ಷ್ಮಿನಾರಾಯಣ ಗೋವಿಂದ ಗೋವಿಂದ ಜಯ ನಮಃ ಪಾರ್ವತಿ ಪತಿಹರಿಹರ ಮಹಾದೇವ ಎಂದು ಹರ್ಷೋದ್ಗಾರ ಮಾಡಿದರು. ಕೆಲಸವನ್ನು ಮುಂದುವರೆಸಿದಾಗ ಸ್ವಾಮಿಯ ಹೇಳಿಕೆಯಂತೆ ಈಶಾನ್ಯ ದಿಕ್ಕಿನಲ್ಲಿ ಒಂದು ಬಿಲ್ಲದ ಕಾಯಿ ಗಾತ್ರದ ಲಿಂಗದ ರೂಪದಲ್ಲಿ ಶಂಕರನು ಕಾಣಿಸಿಕೊಂಡನು ಅಲ್ಲಿದ್ದವರೆಲ್ಲಾ ಹರಿಹರ ಮಹಾದೇವ ಎಂದು ಘೋಷಣೆ ಮಾಡಿದರು. ಸಾಯಂಕಾಲವಾಗುತ್ತಲೇ ಎಲ್ಲರೂ ಸಂತೋಷದಿಂದ ಕೆಲಸ ನಿಲ್ಲಿಸಿ ತಮ್ಮ ತಮ್ಮ ನಿವಾಸ ಸೇರಿಕೊಂಡರು ಮರುದಿನದಿಂದ ಗುಡಿಕಟ್ಟುವ ಕೆಲಸ ಪ್ರಾರಂಭ ಮಾಡಿದರು.

ಹೀಗೆ ಒಂದು ಮಾಸದೊಳಗೆ ಎಲ್ಲಾ ಕೆಲಸ ನೆರೆವೇರಿಸಿದರು. ಬೆಟ್ಟದ ಕೆಳಗೆ ನೈರುತ್ಯ ದಿಕ್ಕಿನಲ್ಲಿ ಒಂದು ನವೀನ ರೀತಿಯ ಬಾವಿಯನ್ನು ಕಟ್ಟಿಸಿದನು. ಬಾವಿಯಲ್ಲಿ ಕೆಲವು ಮಂಟಪಗಳು ನಿರ್ಮಾಣಗೊಂಡವು, ಒಂದು ಮಹಡಿಯನ್ನು ಕಟ್ಟಿಸಿದನು. ಬೆಟ್ಟದ ಮೇಲಿನ ಈ ಬಂಡೆರಂಗನಾಥೇಶ್ವರ ದೇವಾಸ್ಥಾನವನ್ನು ಕಟ್ಟಿಸಿದನು ಪ್ರತಿ ವರ್ಷವು ಸ್ವಾಮಿಯ ರಥೋತ್ಸವವನ್ನು ಜರುಗಿಸಲು ಏರ್ಪಾಡು ಮಾಡಿದನು. ಹೀಗೆ ಕೆಲವು ಕಲ ನೆಮ್ಮದಿಯಿಂದ ಜೀವಿಸಿದ್ಧ ಶ್ರೀ ವೆಂಕಟಾಚಲಪತಿಯು ನಾಯಕನಿಗೆ ಸ್ವಪ್ನದಲ್ಲಿ ಹೇಳಿದಂತಯೇ. ಒಂದು ದಿನ ಏಕಕಾಲದಲ್ಲಿ ನಾಯಕ ದಂಪತಿಗಳು ಮರಣ ಹೊಂದಿ ಸ್ವಾಮಿಯ ಸಾನಿಧ್ಯವನ್ನು ಪಡೆದರು. ನಂತರ ಹಲವಾರು ವರ್ಷಗಳ ನಂತರ ನಾಯಕನು ವಾಸವಾಗಿದ್ದ ಗ್ರಾಮವು ನಾಶ ಹೊಂದಿತ್ತು. ಆದರೆ ಇಂದಿಗೂ ಆ ಗ್ರಾಮದ ಕುರುಹಾಗೇ ಈ ದೇವಾಲಯದ ಬೆಟ್ಟದ ಕೆಳಭಾಗದಲ್ಲಿ ಶ್ರೀಆಂಜನೇಯ ಸ್ವಾಮಿಯ ವಿಗ್ರಹವು ದೇವಾಲಯದ ಮೋಟುಗೋಡೆಗಳು ಉಳಿದಿಕೊಂಡಿವೆ. ಪ್ರತಿ ವರ್ಷವು ಸ್ವಾಮಿಯ ರಥೋತ್ಸವ ಜರುಗುತ್ತದೆ. ಬಂಡೆಯಲ್ಲಿ ಉದ್ಭವವಾಗಿದ್ದ ಸ್ವಾಮಿಯನ್ನು ಬಂಡೆರಂಗನಾಥ(ಬಂಡೆ ರಂಗಪ್ಪ) ಎಂದು ಬೆಟ್ಟಕ್ಕೆ ರಂಗಪ್ಪನ ಗುಡ್ಡವೆಂದು ಇಂದಿಗೂ ಜನರು ಕರೆಯುತ್ತಾರೆ. ತಂಬ್ರಹಳ್ಳಿಗೆ ಪಾಳೆಗಾರನಾಗಿದ್ದ ಓಬಳನಾಯಕ ಮತ್ತು ಅವನ ಮಡದಿ ನಿಷ್ಠಾವಂತ ಧೈವಭಕ್ತರಾಗಿದ್ದರು. ಈ ನಾಯಕನ ಅಧೀನದಲ್ಲಿ ಹಲವು ಧನಕರುಗಳು ಇದ್ದವು. ಅವುಗಳನ್ನು ಕಾಯಲು ಪಾಳೆಗಾರನು ಒಬ್ಬ ಬಾಲಕನನ್ನು ನೇಮಿಸಿದ್ದನು. ಹೀಗಿರುವಾಗ ಒಂದು ದಿನ ಆ ಬಾಲಕನು ದನಗಳೊಂದಿಗೆ ಹಿಂದಿರುಗಿ ಬರುವಾಗ ಆ ಗುಂಪಿನಲ್ಲಿದ್ದ ಬಂದು ಹಸು ತನ್ನ ಹಿಂಡನ್ನು ಅಗಲಿ ಗುಡ್ಡದ ಮೇಲೇರಿ ಪೂರ್ವಾಭಿಮುಖವಾಗಿ ನಿಂತು ತನ್ನ ಕೆಚ್ಚಲಿನಿಂದ ಹಾಲನ್ನು ಸುರಿಸಿ, ನಂತರ

ಒಂದು ತನ್ನ ಹಿಂಡಿನ್ನೊಂದಿಗೆ ಸೇರಿತ್ತಂತೆ. ಇದನ್ನು ಕಂಡ ಬಾಲಕನು ಈ ವಿಷಯವನ್ನು ನಾಯಕನ ಪತ್ನಿಗೆ ತಿಳಿಸಿದನು. ಪಾಳೇಗಾರನ ಪತ್ನಿಯು ತನ್ನ ಪತ್ನಿ ಓಬಳನಾಯಕನಿಗೆ ಈ ವಿಷಯವನ್ನು ತಿಳಿಸಿದಳಂತೆ, ಈ ಘಟನೆಯನ್ನು ಕೇಳಿದ ದಂಪತಿಗಳು ದನದ ಹಿಂಡನ್ನು ಹಿಂಬಾಲಿಸಿಕೊಂಡು ಹೋಗಿ ಹಿಂದಿನ ದಿನದ ಹಾಲು ಕರೆಯುವ ದೃಶ್ಯವನ್ನು ಕಂಡು ಆಶ್ಚರ್ಯಪಟ್ಟರು. ಆಗ ಆ ಸ್ಥಳಕ್ಕೆ ಧಾವಿಸಿದಾಗ ಅಲ್ಲಿ ಹಾಲು ಕರೆದ ಗುರ್ತಿನ ಇರುವ ಕಂಡಂತೆ ಹಸು ಹೀಗೆ ನಿತ್ಯವು ಹಾಲು ಸುರಿಸಲು ಕಾರಣವೆಂದು ನಾಯಕನು ದಿನಾಲು ಯೋಚಿಸಿದ್ದನ್ನು. ಹೀಗಿರುವಾಗ ಒಂದು ದಿನ ನಾಯಕನಿಗೆ ಕನಸಿನಲ್ಲಿ ವೃದ್ದನ ವ್ಯಕ್ತಿಯು ಕಾಣಿಸಿಕೊಂಡನು. ಆಗ ವೃದ್ದನು ಯೋಚಿಸಬೇಡ ನಾಯಕ ನಿನ್ನ ಹಸು ನಿತ್ಯ ಹಾಲು ಸುರಿಸುವ ಸ್ಥಳದ ಬಂಡೆ ಅಡಿಯಲ್ಲಿ ನಿನ್ನ ಆರಾಧ್ಯ ದೈವನಾದ ಶ್ರೀಬಂಡೆ ರಂಗನಾಥ ಇರುವನು. ನೀನು ಬಂಡೆಯನ್ನು ಹೊಡೆದು ಸೀಳಿದಾಗ ಅಲ್ಲಿ ದೇವರು ನೆಲೆಸಿರುವುದು ನಿನಗೆ ತಿಳಿಯುತ್ತದೆ ಎಂದಾಗ ನಾಯಕನು ಹರ್ಷಭರಿತನಾಗಿ ಆನಂದದಿಂದ ಸ್ವಾಮಿ ಈ ಕೆಲಸವು ನಿನ್ನಿಂದ ಸಾದ್ಯವೇ ಎಂದು ಹೇಳಿದನಂತೆ. ಅದಕ್ಕೆ ಆ ವಯೋವೃದ್ದರು ನಾಯಕನೇ ಚಿಂತಿಸಬೇಡ ಈ ಕೆಲಸಕ್ಕೆ ಹಲವಾರು ಕೆಲಸಗಾರರುಬೇಕು. ನೀನು ಕೊಡಲೇ ಜರ್ಮಲಿ ಗುಡಿಕೋಟೆಯ ಪಾಳೆಯಗಾರರಲ್ಲಿ ಹೋಗಿ ಸಕಲ ಸಮಾಚಾರವನ್ನು ತಿಳಿಸು ಆಗ ಅವರು ನಿನ್ನ ನೆರವಿಗೆ ಬಂದೆ ಬರುತ್ತಾರೆ ಎಂದು ಹೇಳಿ ಮೂರನೇ ದಿವಸವೇ ಓಬಯ್ಯ ನಾಯಕನೇ ತನ್ನ ಸೈನ್ಯದೊಂದಿಗೆ ಜರ್ಮಲಿ ಗುಡಿಕೋಟಿ ಪಾಳೆಗಾರರಲ್ಲಿಗೆ ಪ್ರಯಾಣವನ್ನು ಬೆಳೆಸಿ ಅವರಲ್ಲಿಗೆ ಹೋಗಿ ವಿಷಯವನ್ನು ತಿಳಿಸಿದಾಗ ಅವರ ದೇವಸ್ಥಾನದ ಕಟ್ಟಲಿಕ್ಕೂ ಎಲ್ಲಾ ರೀತಿಯ ಸಹಾಯವನ್ನು ಮಾಡಿ, ತಂಬ್ರಹಳ್ಳಿಗೆ ತಮ್ಮ ಸೇವಕರನ್ನು ಕಳಿಸಿದರು.

ಓಬಳ್ಳ ನಾಯಕನ ಒಂದು ಶುಭ ಮೂರ್ತದಲ್ಲಿ ಬಂಡೆ ಒಡೆಸಲು ಪ್ರಾರಂಭಿಸಿದನು. ಸೇವಕರು ಬಂಡೆಯನ್ನು ಒಡೆಯುತ್ತಿರುವಾಗ ಇದ್ದಕ್ಕಿದ್ದಂತೆ ಆ ಬಂಡೆಯು ಬಿರುಕಿನಿಂದ ಚಿಮ್ಮಿದ ರಕ್ತವನ್ನು ಕಂಡ ಸೇವಕರು ಆಶ್ಚರ್ಯದಿಂದ ಭಯ ಭೀತರಾದರು. ಈ ವೃತ್ತಾಂತವನ್ನು ಕೊಡಲೇ ಸೇವಕರು ಬಂಡೆಯನ್ನು ಒಡೆಯುವ ಕಾರ್ಯವನ್ನು ನಿಲ್ಲಿಸಲು ಸೂಚಿಸಿದನು. ಈ ರೀತಿ ಆಗಲು ಕಾರಣವೇನು ಎಂದು ಚಿಂತಾಕಾಂತನಾಗಿ ಮಲಗಿರಲು ಹಿಂದೆ ಕನಸಿನಲ್ಲಿ ಕಂಡ ವಯೋವೃದ್ದ ವೇಷಧಾರಿಯಾಗಿ ಸಾಕ್ಷಾತ ಭಗವಂತನಾಗಿ ಕಾಣಿಸಿಕೊಂಡು ಚಿಂತಿಸದಿರು ನಾಯಕ. ಬಂಡೆ ಹೊಡೆತಕ್ಕೆ ತನ್ನ ಮುಖಕ್ಕೆ ತಾಗಿ ರಕ್ತ ಬಂದಿದೆ. ಇದು ಒಂದು ಸೂಚಕ ದ್ವೇಷ ಅಸೂಹೆಗಳು ಹೆಚ್ಚಾಗಿ ಒಡೆದಾಡುವ ಮುನ್ಸೂಚನೆ. ಆದ್ದರಿಂದ ನೀನು ಕೆಲಸವನ್ನು ಆರಂಭಿಸು ಅಲ್ಲಿಂದ ದೇವಾಲಯವನ್ನು ನಿರ್ಮಿಸು. ನಿತ್ಯ ಪೂಜಾ ಪುನಸ್ಕಾರಗಳಿಂದ ಶಾಂತಿ ನೆಲೆಸಿದಂತೆ ಮಾಡಿ ಎಂದು ಹೇಳಿ ರಂಗನಾಥನು ನಾಯಕನ ಕನಸಿನಲ್ಲಿ ಲೀನವಾದನು.

ಮರು ದಿನವೇ ಆ ಕೆಲಸವನ್ನು ಆರಂಬಿಸಿದ್ದರಿಂದ ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ಸೇರಿಟ್ಟು ಒದಗಿಸಿಕೊಂಡಿರುವ ರಂಗನಾಥನ ಮೂರ್ತಿಯು ಕಣ್ಣಿಗೆ ಗೋಚರಿಸಿತು. ಪಕ್ಕದಲ್ಲಿ ಶಿವಲಿಂಗ ಕಾಣಿಸಿತು. ಹೀಗೆ ಹರಿಹರನು ಒಟ್ಟಿಗೆ ಪ್ರತ್ಯಕ್ಷವಾದ್ದರಿಂದ ರಂಗನಾಥಸ್ವಾಮಿಯ ಬಂಡೆಯಲ್ಲಿ ಒಡೆದು ಮೂಡಿದ್ದು, ಎದುರಿಗೆ ಬಂಡೆರಂಗನಾಥೇಶ್ವರ ಎಂದು ಹೆಸರಿಟ್ಟು ದೇವಸ್ಥಾನವನ್ನು ಓಬಳ ನಾಯಕನು ಕಟ್ಟಿಸಿದನೆಂಬುದೇ ಇಲ್ಲಿನ ಐತಿಹ್ಯ ಆಗಿದೆ.

ಈ ಐತಿಹ್ಯವನ್ನು ಕಥೆಯೆಂದು ಹಾಗೂ ಇದು ನಿಜವಾಗಿಯೋ ನಡೆದಿದ್ದ ಘಟನೆಯೆಂದು ತಂಬ್ರಳ್ಳಿಯಲ್ಲಿ ಸ್ಥಳೀಯರು ಭಾವಿಸಿದ್ದಾರೆ. ಆದರೆ ಇದು ನನಗನಿಸಿದಂತೆ ಇದೊಂದು ಐತಿಹ್ಯ. ನಂತರ ಇವರು ಬರೆದದ್ದಕ್ಕಾಗಿ ಅದು ಕಥೆ. ಈ ಕಥೆ ನಡೆದುದಕ್ಕೆ ಯಾವುದೇ ಚಾರಿತ್ರಿಕ ಆಧಾರಗಳಿಲ್ಲ. ಆದ್ದರಿಂದ ಇದು ಮೌಖಿಕವಾಗಿ ಜನಪದರಲ್ಲಿ ಇಂದಿಗೂ ಜೀವಂತವಾಗಿರುವ ಮೌಖಿಕ ದಾಖಲೆ ಎಂದೇನಿಸಿದೆ.

**ಪುರಾಣಗಳು**

ಒಂದು ದಿನ ತಿರುಪತಿ ತಿಮ್ಮಪ್ಪನ ಮುತ್ತಿನ ವ್ಯಾಪಾರಕ್ಕೆ ಹೀಗೆ ಹೊರಟಿದ್ದನಂತೆ. ನಡೀತಾ ನಡೀತ ಪ್ರಯಾಸವಾಯಿತಂತೆ. ಆಗ ಸೂರ್ಯ ತನ್ನ ಗೂಡಿಗೆ ಮರಳುತ್ತಿದ್ದನಂತೆ ಅದು ತಂಬ್ರಹಳ್ಳಿ ದಾರಿಯಲ್ಲಿ ಬರುತ್ತಿರುವಾಗ ತಿರುಪತಿ ತಿಮ್ಮಪ್ಪನ ತಂಬ್ರಹಳ್ಳಿಯಲ್ಲಿ ನೀರು ಕುಡಿದನಂತೆ. ಎದುರಿಗೆ ನೋಡಿದರೆ ಗುಡ್ಡ ಆದರೆ ಮೇಲೆ ಒಂದು ದೇವಸ್ಥಾನ ಬೆಳೆದಿಂಗಳ ತಂಗಾಳಿಯಲ್ಲಿ ತಿರುಪತಿ ತಿಮ್ಮಪ್ಪನ ಗುಡ್ಡ ಏರಿ ಇಲ್ಲಿ ತಂಗಾಳಿಯು ತಂಪಾಗಿದೆ ಎಂದು ತಲೆಗೆ ಸೇರಿಟ್ಟು ಮಲಗಿದನಂತೆ. ಮುತ್ತಿನ ವ್ಯಾಪಾರಿಯಾದ ತಿರುಪತಿ ತಿಮ್ಮಪ್ಪನ ವ್ಯಾಪಾರ ಮಾಡುವಾಗ ತೂಕಗಟ್ಟಲೆ ಮುತ್ತು ಕೊಡುತ್ತಿರಲಿಲ್ಲವಂತೆ. ಸೇರು, ಪಾವು, ಚಟಾಕುಗಳನ್ನು ಅಳತೆ ಮಾಪನವಾಗಿ ಬಳಸಿ ಹೀಗೆ ವ್ಯಾಪಾರ ಮಾಡುತ್ತಿದ್ದನಂತೆ. ಆದ್ದರಿಂದ ಇಲ್ಲಿ ತಲೆದಿಂಬಿಗೆ ಏನು ಇರದ ಕಾರಣ ತಿಮ್ಮಪ್ಪನ ತಲೆಗೆ ಅಳತೆ ಮಾಪನವಾದ ಸೇರನ್ನು ತಲೆದಿಂಬನ್ನಾಗಿ ಇಟ್ಟದ್ದಾಗಿ, ಯಾರೋ ಬೆಳಗಿನ ಜಾವದಲ್ಲಿ ನರಮನುಷ್ಯರು ಬಂದು ನೋಡಿದರಂತೆ. ಆಗ ತಿಮ್ಮಪ್ಪನು ಹಾಗೆಯೇ ಕಲ್ಲಾಗಿಬಿಟ್ಟಿದ್ದಾನೆಂದು ಕೆಲವರು ಹೇಳುತ್ತಾರೆ. ಇಲ್ಲಿ ತುಂಬಾ ಸೊಗಸಾದ ಪ್ರಶಾಂತವಾದ ವಾತವರಣವಿದೆ. ತಿರುಪತಿ ಇನ್ನೊಂದು ರೂಪವಾಗಿ ನಾನಿಲ್ಲಿ ಇರಬೇಕೆಂದು ದೇವರ ಒಡೆದ ಮೂಡಿದೆ ಎಂದು ಕೆಲವರು ಸ್ಥಳಿಯ ಕಥೆಯನ್ನು ಹೇಳುತ್ತಾರೆ.

ರಂಗಸ್ವಾಮಿ ಹಾಗೂ ಲಕ್ಷ್ಮಮ್ಮ ಬಂಗಾರದ ತೊಟ್ಟಿಲಲ್ಲಿ ಜೋಕಾಲಿ ಆಡಿತ್ತಿದ್ದರಂತೆ ಪ್ರತಿ ದಿನವು ಗಂಡ ಹೆಂಡತಿ ಜೋಕಾಲಿ ಆಡುತ್ತಾ ಸರಸವಾಡುತ್ತಿರುವಾಗ ಒಂದು ದಿನ ನರಮನುಷ್ಯ ಇಣುಕಿ ನೋಡಿದನಂತೆ. ಇಣುಕಿ ನೋಡಿದ ಕೂಡಲೆ ತೊಟ್ಟಿಲಿ ಹರಿದು ಬಾವಿಯೊಳಗೆ ಬಿದ್ದು ಹೋಯಿತು.

ತೊಟ್ಟಿಲು ಬಂಗಾರವಾಗಿದ್ದರಿಂದ ನರಮನುಷ್ಯರು ಅದನ್ನು ಹುಡುಕಲು ಯತ್ನಿಸಿದರು. ಕೊಂಡಿಗಳಿಂದ ಸ್ಥಳಿಯರು ಅವುಗಳ ಬಗ್ಗೆ ಕಥೆ ಹೇಳುವರು ಆದರೆ ಇದಕ್ಕೆ ಪುರಕವಾದ ದಾಖಾಲೆಗಳಿಲ್ಲವಾದ್ದರಿಂದ ಇದೊಮದು ದಮಥ ಕಥೆಯೆಮದು ಹೇಳಬಹುದೆ ಹೊರತು ಇದನ್ನು ನ್ಯಜ ಘಟನೆ ಎಂದು ಬಾವಿಸಲಾಗದು. ಬಂಗಾರದ ತೊಟ್ಟಿಲನ್ನು ಹುಡುಕಲು ಯತ್ನಿಸಿದರು. ಬಾವಿಯಲ್ಲಿರುವ ನೀರನೆಲ್ಲಾ ತೆಗಿಸಿದರೂ ಆ ಬಂಗಾರದ ತೊಟ್ಟಿಲು ಮಾತ್ರ ಸಿಗಲಿಲ್ಲ. ಆದರೆ ಬಂಗಾರದ ತೊಟ್ಟಿಲಿಗೆ ಹಾಕಿರುವ ಕಬ್ಬಿಣದ ಕೊಂಡಿಗಳು ಈಗಲು ಇವೆ. ಕಾರಣ ಕೆಲವರು ನೀರಾವರಿಗೆ ಊರಿನ ಸೌಕರ್ಯಕ್ಕಾಗಿ ಈ ಕೊಂಡಿಗಳಿಂದ ನೀರನ್ನು ಎಳೆಯುತ್ತಿದ್ದರು. ಆದ್ದರಿಂದ ಈ ಕೊಂಡಿಗಳು ಇವೆ ಎಂದು ಹೇಳುತ್ತಾರೆ. ಇನ್ನು ಕೆಲವರು ಈ ಕಥೆಯನ್ನು ನಿರೂಪಿಸಿ ಓಬಳೆಪ್ಪನ ಬಾವಿಯಲ್ಲಿ ಈ ಕೊಂಡಿಗಳನ್ನು ತೋರಿಸಿ ಬಂಗಾರದ ತೊಟ್ಟಿಲಿಗೆ ಹಾಕಿರುವ ಕೊಂಡಿಗಳೆ.

### ೪.೨. ಜಾತ್ರೆಗಳು ಮತ್ತು ಉತ್ಸವಗಳು

**ಜಾತ್ರೆ ಪದದ ಅರ್ಥ**

ಕೃಷಿ ಪ್ರಧಾನವಾದ ಬಹುಮುಖ ಸಂಸ್ಕೃತಿ ಹೊಂದಿದ್ದು ಭಾರತ ದೇಶದಲ್ಲಿ ಜನರು ತಮ್ಮ ಬಿಡುವಿನ ಸಂದರ್ಭದಲ್ಲಿ ಗುಂಪುಗಳಾಗಿ ಸೇರಿ ತಮ್ಮ ಕಷ್ಟ ಸುಖಗಳನ್ನು ಹಂಚಿಕೊಳ್ಳುವುದು ಇನ್ನೂ ಹಲವಾರು ಕೆಲಸ ಕಾರ್ಯಗಳ ಬದಲಾವಣೆ ಮಾಡಿಕೊಳ್ಳುವುದು ಕಾಣುತ್ತೇವೆ ಈ ಎಲ್ಲಾ ಕೆಲಸಗಳಿಗೆ ಜನಪದರ ಒಂದು ನಿರ್ದಿಷ್ಟವಾದ ಸ್ಥಳ ರೂಪಿಸಿಕೊಂಡು ಅವುಗಳನ್ನು ದೇವರ ಸ್ಥಳ, ಧಾರ್ಮಿಕ ಕ್ಷೇತ್ರಗಳೆಂದು ಕರೆಯಲಾಗಿದೆ. ಪ್ರತಿಯೊಂದು ಗ್ರಾಮದಲ್ಲಿ ಒಂದಿಲ್ಲೊಂದು ದೇವರ ಗುಡಿ ಗುಂಡಾರ ಊರ ಹೊರಗೆ ಅಗಲಿ ಊರು ಮಧ್ಯದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಈ ದೇವರುಗಳ ಆರಾಧನೆ, ಆಚರಣೆ, ಜಾತ್ರೆ ಉತ್ಸವಗಳ ಒಂದು ನಿರ್ದಿಷ್ಟ ಕಾಲದಲ್ಲಿ ನಿಯಮಿತವಾಗಿ ಗ್ರಾಮದ ಜನರು ನೆರೆ-ಹೊರೆಯವರ ರಕ್ತ ಸಂಬಂಧಗಳು ಸೇರಿ ನೆರವೇರಿಸುವ ಆಚರಣೆಗ ಜಾತ್ರೆ ಎಂದು ಕರೆಯುತ್ತಾರೆ.[೮]

**ಜಾತ್ರೆ ಪದದ ನಿಷ್ಪತ್ತಿ**

'ಜಾತ್ರೆ' ಎಂಬ ಪದ 'ಯಾತ್ರೆ' ಎಂಬ ಸಂಸ್ಕೃತ ಪದದ ತದ್ಬವ ರೂಪವಾಗಿದೆ. ಜಾತ್ರೆ 'ಪರಿಸೆ' 'ಪರ್ಷಿ' ಈ ಪದಗಳು ಸಹ ಕನ್ನಡಕ್ಕೆ ಬಂದಿರುವ ಸಂಸ್ಕೃತ ಪದಗಳಾಗಿವೆ. ಸಂಸ್ಕೃತದ 'ಪರಿಷತ' ಪದ ಪರಿಭಾಷೆ ಪರ್ಕ್ಷಯಾಗಿ ಕನ್ನಡದಲ್ಲಿ ಬಳಕೆಯಾಗುತ್ತದೆ. 'ಜಾತ್ರೆ' ಯಾತ್ರೆ' ಎಂಬ ಎರಡು ಪದಗಳ ನಡುವಿನ ಸಂಬಂಧದ ಬಗ್ಗೆ ವಿದ್ವಾಂಸರು ಚಿಂತಿಸುವುದನ್ನು ಗಮನಿಸುವುದಾದರೆ. ಯಾತ್ರಾ ಸ್ಥಾನಗಳಲ್ಲಿ ಜಾತ್ರೆ ಸ್ಥಳಾಗಳಾಗಲಿಕ್ಕಿಲ್ಲ ಆದರೆ ಜಾತ್ರೆ ಸ್ಥಳಗಳಲ್ಲಿ ಸಾಮಾನ್ಯವಾಗಿ ಯಾತ್ರೆ ಸ್ಥಳವಾಗಿರುತ್ತವೆ. ಇದಕ್ಕೆ

ಸಮಂಜಸವಾಗಿ ಸಂಸ್ಕೃತದ ಒಂದು ಉಕ್ತಿಯು ಹೀಗಿದೆ. 'ಯಾನೇನ ತ್ರಾಯತ ಇತಿಯಾತ್ರ' ಇದರ ಅರ್ಥ ಪುಣ್ಯಕ್ಷೇತ್ರ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆ ಯತ್ರೆಯಾಗಿದೆ. ನಿಘಂಟುಗಳು ಸಹ ಜಾತ್ರೆ ಕುರಿತಾಗಿ ಪುಣ್ಯ ಕ್ಷೇತ್ರದ ದರ್ಶನ ಮಾಡುವ ಯಾತ್ರೆಯಾಗಿವೆ. ಯಾತ್ರೆ ಎಂದರೆ ಯಾವುದೇ ಕಾರ್ಯದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಪುಣ್ಯ ಕ್ಷೇತ್ರ (ಧಾರ್ಮಿಕ ಕ್ಷೇತ್ರ) ದರ್ಶನ ಪಡೆಯುವುದಾಗಿದೆ. ಇದಕ್ಕೆ ಪೂರಕವಾಗಿ ನಮ್ಮ ಪೂರ್ವಜರು ವರ್ಷಕ್ಕೊಮ್ಮೆ ಇಂತಹ ಸ್ಥಳಗಳಿಗೆ ಒಂದು ನಿರ್ದಿಷ್ಟ ಸಮಯದಲ್ಲಿ ತಾವು ಬೇಡಿಕೊಂಡ ಹರಕೆಗಳನ್ನು ಸಲ್ಲಿಸಲು ಇಂತಹ ಸ್ಥಳಗಳಿಗೆ ಹೋಗುತ್ತಿರುವ ಧಾರ್ಮಿಕ ಸ್ಥಳಗಳಲ್ಲಿ ಮೆರೆಯುವ ಜನಸಮೂಹಕ್ಕೆ ಯಾತ್ರೆ ಎಂದು ಕರೆಯುತ್ತಾರೆ. ಸಾರಿಗೆ ಸೌಲಭ್ಯ ಹಾಗೂ ವಾಹನಗಳ ವ್ಯವಸ್ಥೆ ಇರಲಿಲ್ಲ ಇಂತಹ ಸಮಯದಲ್ಲಿ ಜನರ ಗುಂಪ ಗುಂಪಾಗಿ ಕಾಲ್ನಡಿಗೆಯಲ್ಲಿ ಎತ್ತಿನ ಬಂಡಿಗಳಲ್ಲಿ ತಮ್ಮ ಅಗತ್ಯ ವಸ್ತುಗಳೊಂದಿಗೆ ಜಾತ್ರೆಗೆ ಸೇರುತ್ತಿದದ್ದರು. ಆದರೆ ಇಂದಿನ ಆಧುನಿಕ ಯುಗದ ಜಾತ್ರೆಗಳ ಸ್ವರೂಪ ಲಕ್ಷಣಗಳೇ ಬದಲಾಗಿವೆ. ವೈಜ್ಞಾನಿಕ ಯುಗದಲ್ಲಿ ಹಲವಾರು ಜಾತ್ರೆಗಳು ಪ್ರಾರಂಭವಾಗಿದೆ. ಜನರು ದೇವರನ್ನು ಭಯ ಭಕ್ತಿಯಿಂದ ಭಜನೆ ಮಂಡಳಿಯೊಂದಿಗೆ ಪಾದ ಯಾತ್ರೆ ಮಾಡುವುದು ಶ್ರೇಯಸ್ಕರವೆಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಇದಕ್ಕೆ ಉದಾಹರಣೆಯಾಗಿ ಪಾಂಡರಾಪುರದ ಜಾತ್ರೆ ಶ್ರೀಶೈಲ ಮಲ್ಲಿಕಾರ್ಜುನ ಜಾತ್ರೆ ಇತ್ಯಾದಿ. ಈ ಜಾತ್ರೆಗಳಿಗೆ ಜನರು ಸಹಸ್ರಾರು ಸಂಖ್ಯೆಯಲ್ಲಿ ಪಾದಯಾತ್ರೆಕೈಗೊಳ್ಳಲು ಹಳ್ಳಿಗಳಲ್ಲಿ ಜರುಗುವಂತಹ ಜಾತ್ರಗಳಿಗೆ ನೆರೆ-ಹೊರೆಯ ಹಳ್ಳಿಗಳಿಂದ ತಮ್ಮ ಹರಕೆಯ 'ಕುರುಹು' ಎಂದು ಭಾವಿಸಿ ಇನ್ನೂ ನಡೆದುಕೊಂಡು ಹೋಗುವ ಪದ್ದತಿ ಹಲವಾರು ಜಾತ್ರೆಗಳಲ್ಲಿ ಕಂಡುಬರುತ್ತದೆ.[೧೦]

**ಜಾತ್ರೆಗಳ ಮಹತ್ವ**

ಜಾತ್ರೆಗಳ ಗ್ರಾಮೀಣ ಜನರ ಬದುಕಿನ ಒಂದು ಪ್ರಮುಖ ಅಂಗವಾಗಿವೆ. ವರ್ಷದ ನಿರ್ದಿಷ್ಟ ಸಮಯದಲ್ಲಿ ಜಾತ್ರೆ ಜರುಗುವುದರಿಂದ ಆ ಗ್ರಾಮದ ಜನರಲ್ಲದೇ ನೆರೆ-ಹೊರೆ ಹಳ್ಳಿಗಳಿಂದ ಬರುವಂತಹ ಜನರು ಇದರಲ್ಲಿ ಭಾಗವಹಿಸಿ ಹಲವಾರು ಪ್ರಯೋಜನ ಪಡೆದುಕೊಳ್ಳುವರು. ಜಾತ್ರೆಗಳು ಆಯಾ ದೇವ ಭಕ್ತರಗಳನ್ನು ಅವಲಂಭಿಸಿ ಜರುಗುವುದರಿಂದ ಭಕ್ತರನ್ನಲ್ಲದೇ ಎಲ್ಲಾ ಧರ್ಮವನ್ನು ಒಂದು ಕಡೆ ಸೇರುವಂತೆ ಮಾಡುತ್ತದೆ. ಜನಪದರ ತಮಗೆ ಉದ್ಭವಿಸುವ ಸಮಸ್ಯೆಗಳಿಂದ ಕ್ಷಾಮ ಬರಗಾಲ, ಕಾಯಿಲೆ, ಮಳೆಯ ಅಭಾವದಿಂದಾಗಿ ಬಾವಿಗಳ ನೀರನ್ನು ಮುಟ್ಟುವ ಕಡಿತಗೊಂಡಲ್ಲಿ ಇವುಗಳ ಪರಿಹಾರಕ್ಕಾಗಿ ಇವುಗಳ ಪರಿಹಾರಕ್ಕಾಗಿ ದೇವರ ಸನ್ನಿಧಿಯಲ್ಲಿ ಜನಪದರು ಹೊಂದಿದ ಹೊಲುಮೆಯ ಸಹಕಾರದಿಂದ ಜಾತ್ರೆಗಳು ಜರುಗುತ್ತದೆ. ಜಾತ್ರೆಗಳ ಧರ್ಮವನ್ನು ಜನಪ್ರಿಯಗೊಳಿಸುವುದಲ್ಲದೇ ಸಾರ್ವಜನಿಕ ಕ್ಷೇಮ

ಅಭಿವೃದ್ಧಿಯನ್ನು ಉಂಟು ಮಾಡುತ್ತದೆ. ಹಾಗೆಯೇ ಪ್ರಸ್ತುತ ತಂಬ್ರಳ್ಳಿಯಲ್ಲಿನ ಗ್ರಾಮದಲ್ಲಿ ನಡೆಯುವ ಜಾತ್ರೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಶ್ರೀ ಬಂಡೆರಂಗನಾಥ ಸ್ವಾಮಿಯ ರಥೋತ್ಸವ**

ತಂಬ್ರಹಳ್ಳಿ ಗ್ರಾಮದಲ್ಲಿ ಶ್ರೀರಂಗನಾಥೇಶ್ವರ ಸ್ವಾಮಿಯ ರಥೋತ್ಸ ಹಲವಾರು ವರ್ಷಗಳಿಂದ ತಂಬ್ರಹಳ್ಳಿಯಲ್ಲಿ ಆಚರಿಸಲಾಗುತ್ತದೆ. ರಥೋತ್ಸವವು ಪ್ರತಿ ವರ್ಷ ಪಾಲ್ಗುಣ ಮಾಸ ಹೋಳಿ ಹುಣ್ಣಿಮೆಯ ದಿನದಂದು ವಿಜೃಂಭಣೆಯಿಂದ ಸೇರುತ್ತದೆ. ಇಲ್ಲಿನ ಬಂಡೇರಂಗನಾಥ ಸ್ವಾಮಿಯ ದೇವಸ್ಥಾನದ ರಥವು ಹಳೆಯದಾಗಿದ್ದಾರಿಂದ ಎರಡು ವರ್ಷಗಳ ಹಿಂದೆ ಇಲ್ಲಿನ ಭಕ್ತರು ೩೫ ಲಕ್ಷ ವೆಚ್ಚದಲ್ಲಿ ಸುಂದರವಾದ ನೂತನ ರಥ ನಿರ್ಮಾಣ ಮಾಡಿದ್ದಾರೆ, ದೇವಸ್ಥಾನದ ಸಮಿತಿಯ ಸದಸ್ಯರು ಗ್ರಾಮದ ಹಿರಿಯರನ್ನು ಸೇರಿಸಿ ವರ್ತಕರು ಕೂಲಿಕಾರ್ಮಿಕರು ಹಾಗೂ ರಾಜ್ಯದ ವಿವಿಧ ಜಿಲ್ಲೆಗಳಿಂದ ಸುಮಾರು ೧೧೦೦ಕ್ಕು ಹೆಚ್ಚು ಭಕ್ತರು ನೆರವಿನಿಂದ ರಥ ನಿರ್ಮಾಣ ಮಾಡಲಾಗಿದೆ. ಇಟಗಿಯ ಪ್ರಸಿದ್ದ ಶಿಲ್ಪಗಳಾದ ಜಿತೇಂದ್ರಚಾರಿ ಹಾಗೂ ಮೌನೇಚಾರಿ ಬಳಗದ ನಾಲ್ಕು ತಿಂಗಳುಗಳ ಕಾಲ ಅವಿರತ ಶ್ರಮಪಟ್ಟು ೩೭ಅಡಿ ಎತ್ತರ ಹಾಗೂ ೩೩ ಅಡಿ ಸುತ್ತಳತೆಯ ರಥವನ್ನು ನಿಮಿಸಿದರು. ವೈಷ್ಣವ ಸಂಪ್ರದಾಯದಲ್ಲಿದೆ. ಸುಮಾರು ೧.೫೦ ಲಕ್ಷದಲ್ಲಿ ಕಿನ್ನಾಳ ಕಲಾವಿದರಿಂದ ಆಕರ್ಷಕವಾಗಿ ತಯಾರಾದ ೮ ಗೊಂಬೆಗಳು ಹಾಗೂ ನಾಲ್ಕು ದ್ವಾರ ಬಾಗಿಲು ನಿರ್ಮಿಸಲು ಪ್ರತ್ಯೇಕವಾಗಿ ದೇಣಿಗೆ ನೀಡಿ ಸಹಕರಿಸಿದ್ದು ರಥದ ಸುತ್ತಲೂ ನವಗ್ರಹ ದಶಾವತಾರ ಅಷ್ಟದಿಕ್ವಾಕರು ವಿಘ್ನೇಶ್ವರ ಆಂಜನೇಯ ಆದಿಶಕ್ತಿ, ಲಕ್ಷ್ಮಿನರಸಿಂಹ ಕೆಚಗುಳಿಡುವ ಲೈಂಗಿಕ ಉಬ್ಬು ಶಿಲ್ಪಗಳು ಸ್ಥಿರಿದಂತೆ ಅನೇಕ ಭಕ್ತರ ಖಣ್ಮನೆ ಸೆಳೆಯುತ್ತದೆ. ರಂಗನಾಥೇಶ್ವರ ಮತ್ತು ಚೆರಂತೇಶ್ವರ ಮೂರ್ತಿಗಳು ತೇರಿಗೆ ವಿಶೇಷ ಕಳೆ ತಂದಿವೆ.

**ಪಂಚಮಿ ಹಬ್ಬ**

ಮಾನವ ಸಂಘಜೀವಿಯಾಗಿ ನಾಗರೀಕತೆ ರೂಢಿಸಿಕೊಂಡಂತೆಲ್ಲಾ ಹಲವಾರು ರೀತಿ ಅನುಕೂಲಗಳನ್ನು ತಾನಾಗಿಯೇ ಕಂಡುಕೊಂಡನು. ಕಾರಣ ಮನಸ್ಸಿಗೆ ಮುದ, ನಿರ್ಲಿಪ್ತತೆ, ಆಹ್ಲಾದತೆ, ಸಂತಸ ಇವೆಲ್ಲಾ ಇದ್ದಾಗಲೇ ಮನಸ್ಸು ಮತ್ತು ದೇಹ ಆರೋಗ್ಯಕರ ಹಾಗೂ ಕ್ರೀಯಾಶೀಲವಾಗಿರಲು ಸಾಧ್ಯವಾಗುತ್ತದೆ. ಈ ರೀತಿಯ ಸಂತೋಷ ಸಂಭ್ರಮ ಕಳೆಯಬೇಕಾದರೆ ಅದು ಜನಸಮೂಹಗಳಿಂದ ಮಾತ್ರ ಸಾಧ್ಯ. ಒಬ್ಬನೇ ಎಲ್ಲವನ್ನು ಪಡೆಯಲಾರ. ಆದ್ದರಿಂದ ನಮ್ಮ ಜನಪದರು ಈ ಹಬ್ಬ, ಹರಿದಿನ, ಜಾತ್ರೆ, ಪರಿಷೆಗಳನ್ನು ಆಚರಿಸುತ್ತಾ ಬಂದಿರುವುದು ಸುತ್ಯಾರ್ಹ.

ನಾಗರ ಅಮವಾಸ್ಯೆಯ ಮುಂದೆ ಇದ್ದಾಗಲೇ ಧೂಳು ಜಾಡಿಸಿ, ಮನೆಯನ್ನು ಸ್ವಚ್ಚಗೊಳಿಸಿ ಸುಣ್ಣ-ಬಣ್ಣ ಬಳಿದು, ಕಸೂತಿ ಹಾಕಿದ ಬಟ್ಟೆಗಳಿಂದ ಬಾಗಿಲುಗಳನ್ನು ಅಲಂಕಾರಿಸುತ್ತಾರೆ. ಅಮವಾಸ್ಯೆ ದಿನದಂದು ಪ್ರತೀ ಅಮವಾಸ್ಯೆಯಂತೆ ಮನೆಯ ದೇವರನ್ನು ಪೂಜಿಸಿ, ಸಿಹಿ ಊಟದ ಎಡೆ ಮಾಡುತ್ತಾರೆ. ಈ ದಿನದಿಂದ ಬೆನಕನ ಅಮವಾಸ್ಯೆಯವರೆಗೂ ಅಂಗಳದಲ್ಲಿ ನಾಗಪ್ಪನ ರಂಗೋಲಿಯನ್ನೇ ಹೆಚ್ಚಾಗಿ ಎಲ್ಲರ ಮನೆಯ ಮುಂದೆ ಕಾಣಲಾಗುತ್ತದೆ. ಕೆಲವರು ಚೌತಿಯ ದಿನ ಹಾಲನ್ನು ನಾಗಪ್ಪನಿಗೆ ಎರೆಯುತ್ತಾರೆ. ಇನ್ನೂ ಕೆಲವರು ಪಂಚಮಿ ದಿನ ಹಾಲನ್ನು ಎರೆಯುತ್ತಾರೆ. ಈ ಎರಡು ದಿನದ ಹಿಂದಿನ ದಿನವನ್ನು "ರೊಟ್ಟಿಹಬ್ಬ" ಎಂದು ಆಚರಿಸುತ್ತಾರೆ. ಹಿಂದೆ ಎಲ್ಲಾ ಅವಿಭಕ್ತ ಕುಟುಂಬಗಳಲ್ಲಿ ೫೦೦, ೯೦೦ ರೊಟ್ಟಿಗಳನ್ನು ಮಾಡುತ್ತಿದ್ದರು. ಆದರೆ ಈಗ ಬರೀ ೧೦೦,೧೫೦, ಎಳ್ಳು ಹಚ್ಚಿದ ಬಿಳಿಜೋಳ, ಸಜ್ಜೆ ಧಾನ್ಯದ ರೋಟ್ಟಿಯನ್ನು ೧೫ ದಿನ ಮುಂಚಿತವಾಗಿಯೇ ಮಾಡಿ ಒಂದು ಬಿಳಿಬಟ್ಟೆಯಲ್ಲಿ ಕಟ್ಟಿ, ನೆಲಗಣೀಗೆ ಜೋತು ಬಿಡುತ್ತಾರೆ. ರೊಟ್ಟಿ ಹಬ್ಬದ ದಿನದಂದು ಮನೆಯಲ್ಲಿ ಮನೆದೇವರಿಗೆ ಪೂಜಿಸಿ, ಕಾಯಿ ಒಡೆದು ಈ ದಿನದ ನೈವೇದ್ಯಕ್ಕೆ ಬಿಸಿರೊಟ್ಟಿಯನ್ನೇ ದೇವರಿಗೆ ಎಡೆಯನ್ನು ಇಡುತ್ತಾರೆ. ಹಲವಾರು ರೀತಿಯ ಪಲ್ಯಗಳನ್ನು ನಮ್ಮ ಜನಪದ ತಾಯಂದಿರು ಉತ್ಸುಕರಾಗಿ ವೈವಿಧ್ಯಯಮಯ ಅಡುಗೆಗಳನ್ನು ಮಾಡುತ್ತಾರೆ. ಎಣ್ಣೆ ಬದನೆಕಾಯಿ, ಹೀರೇಕಾಯಿ ಪಲ್ಲೆ, ಜವಳಿಕಾಯಿ ಪಲ್ಲೇ, ಮೆಣಸಿನಕಾಯಿ, ಪಲ್ಲೆ, ಹಸಿಮೆಣಸಿನಕಾಯಿ, ಚೆಟ್ನಿ, ಬೆಂಡೇಕಾಯಿ ಹುರಿದಿರೊದು, ಮೊಳಕೆಯ ಹೆಸರುಕಾಳು, ಕಡ್ಲೆಕಾಳು, ಮಡಕಿಕಾಳು ಪಲ್ಯ, ಪುಂಡಿಪಲ್ಯ, ಗುರಳ್ಳುಪುಡಿ, ಶೇಂಗಾಪುಡಿ, ಕೊಬ್ಬರಿಪುಡಿ, ಹುರಕಡ್ಲಿಪುಡಿ, ಒಣಮೆಣಸಿಕಾಯಿಯ ಬೆಳ್ಳುಳಿಪುಡಿ, ಅಕ್ಕರಿಕೆಸೊಪ್ಪು, ಮೆಂತೆಸೊಪ್ಪು, ಗೊರೆಜಿಸೊಪ್ಪು, ಬೇಯಿಸಿ ಪಲ್ಯ ಮಾಡಿರುತ್ತಾರೆ. ಜೊತೆಗೆ ಮೊಸರನ್ನು ಮಾಡಲಾಗುತ್ತದೆ. ಮನೆಯವರೆಲ್ಲಾ ಊಟ ಮಾಡುವ ಹೊತ್ತಿಗೆ ಓಣಿಯಲ್ಲಿ ಇರುವವರು ಹೆಚ್ಚಾಗಿ ಆಯಾ ಓಣಿ, ಊರುಗಳಲ್ಲಿ ರೊಟ್ಟಿಹಬ್ಬದ ದಿನದಂದು ಅಡುಗೆ ತಟ್ಟೆಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಇದು ಪ್ರೀತಿ ವಿಶ್ವಾಸದ ಸಂಕೇಥ, ಇದೇ ರೊಟ್ಟಿ ಹಬ್ಬದಿನದ ವಿಶೇಷವಾಗಿರುತ್ತದೆ. ಪಂಚಮಿ ದಿನ ನಾಗಪ್ಪನಿಗೆ ಹಾಲೆರೆಯುವ ದಿನ. ಮನೆಯಲ್ಲಿ ಎಲ್ಲರೂ ತಲೆ ಸ್ನಾನ ಮಾಡಿಕೊಂಡು ಪೂಜಾ ಸಾಮಾಗ್ರಿಗಳನ್ನು ಸಿದ್ದವಾಗಿಟ್ಟು, ಹಬ್ಬ ಎರಡು ತಿಂಗಳು ಇದೆ ಎಂದಾಗಲೇ ಗೋಧಿ ಸಸಿಯನ್ನು ಮನೆಯಲ್ಲಿ ಬೆಳೆಸಿರುತ್ತಾರೆ. ಇವನ್ನು ಪೂಜೆಗೆ ತೆಗೆದುಕೊಂಡು ದೇವರ ಎಡೆಗೆ ಮಂಡಕ್ಕಿ, ವಗ್ಗರಣೆ, ವಡೆ ಎಳ್ಳು ಹಸಿಹಿಟ್ಟು, ಚಿಗುಳಿ, ಹಸಿಹಾಲನ್ನು ತೆಗೆದುಕೊಂಡು ಊರಲ್ಲಿರುವ ನಾಗರಕಲ್ಲಿಗೆ ಹಾಲೆರೆಯಲು ಹೋಗುತ್ತಾರೆ. ಈ ರೀತಿ ಪೊಜೆ ಮಾಡಿಕೊಂಡು ಹಾಲೆರೆದು ಮನೆಗೆ ಬಂದು ಎಡೆಯ ಜೊತೆಗೆ ಉಂಡಿ, ಚಿತ್ರಾನ್ನವನ್ನು ಮಾಡಿಕೊಂಡು ಮನೆಯವರೆಲ್ಲಾ ಊಟ ಮಾಡುತ್ತಾರೆ.

**ದಸರಾ ಹಬ್ಬ**

ಈ ದಸರಾ ಹಬ್ಬವು ಆದಿಶಕ್ತಿ ರಾಕ್ಷಸರನ್ನು ಕೊಂದ ದಿನವನ್ನೇ ವಿಜಯದಶಮಿಯಾಗಿ ಆಚರಿಸುತ್ತಾರೆ. ಹಾಗೆಯೇ ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಬಿಲ್ಲು ಬಾಣಗಳನ್ನು ಬನ್ನಿಮರದಲ್ಲಿ ಇಟ್ಟಿದ್ದರು. ಈ ವಿಜಯದಶಮಿ ದಿನವೇ ಹೊರತೆಗೆದರು ಎಂಬ ಪ್ರತೀತಿ ಇದೆ. ನವ ದಿನಗಳ ಕಾಲ ದೇವಿಯ ಪಾರಾಯಣ ಮಾಡಿ ನಂತರ ಕೊನೆಯ ದಿನ ವಿಜಯದಶಮಿಯನ್ನು ಆಚರಿಸುತ್ತಾರೆ.

ಗೋಧೋಳಿ ಸಮಯದಲ್ಲಿ ಆದಿಶಕ್ತಿಯನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಗಂಗೆಗೆ ಹೋಗಿ ಹಾಗೇಯೇ ಬನ್ನಿ ಮರಕ್ಕೆ ಹೋಗಿ ಅಲ್ಲಿ ಬನ್ನಿ ಮಹಾಕಾಳಿಯನ್ನು ಪೂಜಿಸಿ ಬನ್ನಿಪತ್ರಿ ತೆಗೆದುಕೊಂಡು ಊರಲ್ಲಿ ಹಿರಿಯರಿಗೆ ಬನ್ನಿಯನ್ನು ಕೊಟ್ಟು ತೆಗೆದುಕೊಂಡು "ಬನ್ನಿ ತೆಗೆದುಕೊಂಡು ಬಂಗಾರದಂಗೆ ಇರೋಣ" ಎಂಬ ನುಡಿಯನ್ನು ಹೇಳುತ್ತಾ ಅಂದು ಊರಲ್ಲಿ ಯಾರಾದರೂ ಜಗಳ ಮಾಡಿದ್ದರೆ ಈ ಬನ್ನಿಪತ್ರಿಯು ಎಲ್ಲರನ್ನು ಒಂದುಗೂಡಿಸಿ ಕಳೆದ ದಿನಗಳನ್ನು ಮರೆತು ಹೊಸ ಬದುಕಿಗೆ ಅನುವಾಗುತ್ತಾರೆ. ಇನ್ನೂ ಕೆಲವರಂತೂ ದ್ವೇಷವನ್ನು ಹೊಟ್ಟೆಯಲ್ಲಿ ಇಟ್ಟುಕೊಂಡು ಕೊನೆಯವರೆಗೂ ಸಾಧಿಸುತ್ತಲೇ ಸಾಯುವವರಿಗೂ ಬದುಕಿರುವ ಉದಾಹರಣೆಗಳು ತಂಬ್ರಹಳ್ಳಿ ಗ್ರಾಮದಲ್ಲಿವೆ.

**ಯುಗಾದಿ ಹಬ್ಬ:**

ಭಾರತದ ಹಿಂದೂ ಧರ್ಮದ ಹಲವು ಜಾತಿ ಸಂಪ್ರದಾಯಗಳ ಪ್ರಕಾರ ಯುಗಾದಿ ಹಬ್ಬವೆ ವರುಷದ ಮೊದಲ ಹಬ್ಬವಾಗಿದೆ. ಹಿಂದೂ ಸಂಪ್ರಾದಯ ಪ್ರಕಾರ ಪಾಲ್ಗುಣ ಅಮಾಸೆಯ ದಿನ ಹಳೆಯ ವರುಷಕ್ಕೆ ವಿದಾಯ ಹೇಳಿ, ಮರುದಿನ ಚೈತ್ರ, ಯುಗಾದಿ ಎಂಬ ಸಂಸ್ಕೃತದ ಪದದ ತದ್ಭವರೂಪ ಉಗಾದಿ. ಸಮಸ್ಕೃತದಲ್ಲಿ ವರುಷ ಆದಿ ಎಂದರೆ ಆರಂಭ ಎಂದರ್ಥ. ಒಟ್ಟಿನಲ್ಲಿ ವರ್ಷ ಆರಂಭದ ದಿನ ಎಂದರ್ಥ ಈ ಹಬ್ಬದ ದಿನ ಮನೆಯನ್ನೆಲ್ಲ ತೊಳೆದು ತೊರಣಗಳಿಂದ ಬಾಗಲಿಗೆ ಕಟ್ಟಿ ಪೂಜೆ ಮಾಡಿ ಊಟಕ್ಕೆ ಮೊದಲು ಬೇವು ಬೆಲ್ಲ ತಿನ್ನುವುದು ವಾಡಿಕೆಯಾಗಿದೆ. ಸಿಹಿ ಮತ್ತು ಕಹಿ ಇವೆರಡು ಬದುಕಿನ ಪ್ರತೀಕ ನೋವು ನಲಿವಿನ ಸಂಕೇತ ಇದನ್ನು ಚನ್ನವೀರಕಣವಿಯವರ ಜೀವನವೆಲ್ಲಾ ಬೇವು ಬೇಲ್ಲ ಎರಡನ್ನು ಸವಿದನು ಕವಿ ಮಲ್ಲ ಎಂದಿದ್ದಾರೆ. ಯುಗಾದಿ ದಿನದ ಅಭ್ಯಂಜನ ಸ್ಥಾನಮಾಡಿ ದೇವರನ್ನು ಪೂಜೆ ಮಾಡಿ ಗುರುಹಿರಿಯರಿಗೆ ನಮಸ್ಕಾರ ಮಾಡುವ ಪದ್ಧತಿ ಹೀಗಲು ಗ್ರಾಮದಲ್ಲಿ ಪ್ರಚಲಿತವಾಗಿದೆ.

ತಂಬ್ರಹಳ್ಳಿಯ ಪರಿಸರದ ಜನರು ಯುಗಾದಿ ಹಬ್ಬವನ್ನು ತಪ್ಪದೆ ಆಚರಣೆ ಮಾಡುತ್ತಾರೆ. ಪರಂಪರಾಗತವಾಗಿ ಬೆಳೆದುಕೊಂಡು ಬಂದಿರುವ ಹಲವು ಸಂಪ್ರದಾಯಗಳನ್ನು ಈ ಹಬ್ಬದಲ್ಲಿ ಆಚರಣೆ

ಮಾಡುವುದರಿಂದ ಹಬ್ಬದ ಮೊದಲು ದಿನ ಸಂಜೆಯ ಸಮಯದಲ್ಲಿ ಚಂದನನ್ನು ನೋಡುತ್ತಾರೆ. ಚಂದಿರನು ಹಾಗ ತಾನೆ ಚಿಕ್ಕದಾಗಿ ಮೂಡಿರುತ್ತಾನೆ. ಅದನ್ನು ಮೊದಲು ನೋಡಿದವರಿಗೆ ಅದೃಷ್ಟ ಬರುತ್ತದೆ ಎಂದು ಹಿರಿಯರು ಹೇಳುತ್ತಾರೆ. ಆ ಸಮಯದಲ್ಲಿ ಚಂದಿರನ ಮೇಲಿರು ದಿಕ್ಕನ್ನು ಭಾಗದಲ್ಲಿ ಮಳೆ ಬೆಳೆ ಉತ್ತಮವಾಗುವುದು ಈ ಭಾಗದ ಜನರು ಸಂತೃಪ್ತಿ ಜೀವನ ನಡೆಸುತ್ತಾರೆ ಎಂಬ ನಂಭಿಕೆಯನ್ನು ಸ್ಥಳೀಯರಲ್ಲಿ ಕಾಣಬಹುದು. ಕೆಲವು ಕುಟುಂಬಗಳು ತಮ್ಮ ಹಿರಿಯರ ಸಮಾಧಿ ಬಳಿ ಹೋಗಿ ಪೂಜೆ ಮಾಡುವ ಪದ್ಧತಿ ರೂಡಿಯಲ್ಲಿದೆ ಹಬ್ಬದ ಎರಡನೆ ದಿನವನ್ನು ಹೊಸ ತೊಡಕು ಎಂದು ಕರೆಯುತ್ತಾರೆ.

**ಹೋಳಿ ಹುಣ್ಣಿಮೆ**

ಅರ್ಚಕರು ಪ್ರತಿದಿನದಂತೆ ಪೂಜೆ ಅಭಿಷೇಕ, ಆಭರಣ, ಅಲಂಕಾರ, ರಥ ಪೂಜೆ ಮಾಡಲು ನಾದಿ ಇಟ್ಟುಕೊಂಡ ಮೇಲೆ ಜಾತ್ರೆ ಕೆಲಸ ಮುಗಿಯುವ ವರೆಗೂ ಅವರ ಈ ಕೆಲಸವನ್ನು ಈ ಕೆಲಸವನ್ನು ನೆರವೇರಿಸುತ್ತಾರೆ. ನಾಲ್ಕು ಗಾಲಿಗಳಿಗೂ ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣಕ್ಕೆ ರಥಪೂಜೆ ಮಾಡುವಾಗ ಈ ದಿಕ್ಕಿಗೆ ಇಂತಿಂಥ ದೇವರಿದ್ದಾನೆ ಎಂದು ರಥಪೂಜೆಯಲ್ಲಿ ಮಂತ್ರವನ್ನು ಹೇಳುತ್ತಾ ಪೂಜಿಸುತ್ತಾರೆ. ಈ ಪೂಜೆ ಆದ ನಂತರ ಐದು ಸೇರು ಅಕ್ಕಿಯಿಂದ ಬಲಿಯನ್ನವನ್ನು ಅರ್ಚಕರು ಮಾಡುತ್ತಾರೆ. ಮೊದಲೆರಡು ದಿನ ಪೂಜಾರಿ ಮಾಡುತ್ತಾನೆ. ಆದರೆ ಹುಣ್ಣಿಮೆಯ ದಿನ ಬ್ರಾಹ್ಮಣರೇ ಬಲಿಯನ್ನವನ್ನು ಮಾಡುತ್ತಾರೆ. ಕೆಂಪನ್ನ, ಅರಿಶಿಣ, ಸುಣ್ಣವನ್ನು ಕಲಸಿ ಕೆಂಪುಮಾಡಿ ಮಣ್ಣಿನ ಕೊಡದಲ್ಲಿ ನೀರು ತುಂಬಿ ದೊಡ್ಡ ಬಿದಿರು ಬುಟ್ಟಿಯೊಳಗೆ ಅನ್ನವನ್ನು ಹಾಕುತ್ತಾರೆ. ಆ ನೀರನ್ನು ಅನ್ನವನ್ನು ಕಳಸವಿಟ್ಟ ಜಾಗದಲ್ಲಿ ದೂಪ ದೀಪದಿಂದ ಪೂಜಿಸಿ, ನೈವೇಧ್ಯಮಾಡಿ, ತೆಂಗಿನಕಾಯಿ ಹೊಡೆದು ನಿವೇದಿಸಿ, ಒಬ್ಬರು ಬಲಿಯನ್ನದ ಬುಟ್ಟಿಯನ್ನು ಹೊತ್ತುಕೊಂಡು, ಇನ್ನೊಬ್ಬರು ಕೊಡವನ್ನು ಹೊತ್ತುಕೊಂಡು, ಮತ್ತೊಬ್ಬರು ಲಕ್ಕಿಪತ್ರಿ, ಬನ್ನಿಪತ್ರಿಯನ್ನು ಹೊತ್ತುಕೊಂಡು, ಮಂತ್ರಾಕ್ಷತೆಯನ್ನು ತೆಗೆದುಕೊಂಡು ದೇವರ ಪಲ್ಲಕ್ಕಿ ಹಿಂದೆ ನೀರು ಹಾಕುತ್ತ ನೀರು ಹಾಕುತ್ತ ಬಲಿಯನ್ನವನ್ನು ಅದರ ಮೇಲೆ ಹಾಕುತ್ತಾ ಲಕ್ಕಿ ಪತ್ರಿ, ಬನ್ನಿಪತ್ರಿ, ಮಂತ್ರಾಕ್ಷತೆ ಹಾಕುತ್ತಾ ಅದರಂತೆ ಗರ್ಭಗುಡಿಯನ್ನು ಸುತ್ತುವರೆದು ಗರುಡಗಂಬದ ನಾಲ್ಕು ಕಡೆಗೂ ಬಲಿಯನ್ನವನ್ನು ಹಾಕಿ ಬಲಿಪೀಠದ ಮೇಲೆ ಅನ್ನವನ್ನು ಹಾಕಿ, ಪಕ್ಕದಲ್ಲಿರುವ ಕೆಂಡದ ಹೊಂಡಕ್ಕೂ ಹಾಕಿ ಮತ್ತು ನಾಲ್ಕು ದಿಕ್ಕಿಗೆ ಹಾಕಿ ಅಲ್ಲಿಂದ ಗಾಳಿಗೋಪುರದ ನಾಲ್ಕು ಮೂಲೆಗೂ ಬಲಿಯನ್ನವನ್ನು ಹಾಕುತ್ತಾರೆ. ಇಳಿಯುವಾಗ ನೀರಿನ ಹೊಂಡದ ಕಟ್ಟೆಗೆಯಲ್ಲಿ ಹಾಕಿ ನಂತರ ಕನಕರಾಯನ ಗುಡಿಯ ಬಾಗಿಲಲ್ಲಿ, ಕೆಳಗಡೆ ಹನುಮಂತ ದೇವರ ಗುಡಿಯ ತೇರಿನ ನಾಲ್ಕು ಗಾಲಿಗಳಿಗೆ ಬಲಿಯನ್ನವನ್ನು ಹಾಕಿ, ಗೋವಿಂದ ಗೋವಿಂದ ಎನ್ನುತ್ತ ಬಿಸಿಲಲ್ಲಿ ಪಾದಗಟ್ಟೆಯವರೆಗೂ

ಹೋಗಿ ಬಲಿಯನ್ನವನ್ನು ಹಾಕಿ ಗೋವಿಂದ ನಾಮ ಸ್ಮರಣೆ ಮಾಡುತ್ತಾ ಬರುವರು. ಮತ್ತೆ ಉಳಿದ ಅನ್ನವನ್ನು ಬುಟ್ಟಿಸಹಿತವಾಗಿ ಎಸಿಯುತ್ತಾರೆ. ಮಣ್ಣಿನ ಕೊಡವನ್ನು ಅಲ್ಲಿಯೇ ಎಸೆದು ಸೀದಾ ಭೋಜನ ಸ್ಥಳಕ್ಕೆ ಬರುತ್ತಾರೆ.

ಸಾಯಂಕಾಲದ ಐದು ಗಂಟೆಗೆ ರಥೋತ್ಸವ ನಡೆಯುತ್ತದೆ. ಪಲ್ಲಕ್ಕಿಯಲ್ಲಿ ಮಂಗಳ ವಾದ್ಯಗಳೊಂದಿಗೆ ದೇವರ ಮೆರವಣಿಗೆ ಹೊರಡುತ್ತದೆ. ರಥ ಎಳೆಯುವುದಕ್ಕೆ ಊರಿನವರೆಲ್ಲ ರಥದ ಮಿಣಿಯನ್ನು (ಹಗ್ಗ) ಎಳೆಯಲು ಬರುತ್ತಾರೆ. ಮಿಣಿ ತರುವವರು ಯಡ್ರಮನಹಳ್ಳಿಯವರು ಯಾವ ಪ್ರತಿಫಲವನ್ನು ಹಲಗೆಯನ್ನು ಬಡೆಯುತ್ತಾ ಹೊಸ ಮಿಣಿಯನ್ನು ಆ ವರ್ಷ ಅರ್ಪಿಸಿ ಹೋಗುತ್ತಾರೆ. ದೇವರ ರಥದಲ್ಲಿ ಕುಳಿತು ಮೇಲೆ ಟ್ರಸ್ಟ್‌ನವರು ಪಟಾಕ್ಷಿಯನ್ನು ಹರಾಜು ಮಾಡುತ್ತಾರೆ. ಧನ ಸಹಾಯ ಮಾಡುವ ಇಚ್ಛೆ ಉಳ್ಳುವವರು ಪಟಾಕದಷಿಯನ್ನು ಕೊಂಡುಕೊಂಡು ಆ ವರ್ಷವೆಲ್ಲ ತಮ್ಮ ದೇವರ ಮನೆಯ ಜಗಲಿಯ ಮೇಲೆ ಇಟ್ಟು ನಿತ್ಯವೂ ಪೂಜಿಸುತ್ತಾರೆ. ಮರು ವರ್ಷ ಹುಣ್ಣಿಮೆಯ ದಿನ ಆವತ್ತಿಗೆ ಎಲ್ಲವೂ ಹಾಕಿದಷ್ಟು ಹಣವನ್ನು ತಂದು ಪಟಾಕ್ಷಿಯನ್ನು ಒಪ್ಪಿಸುತ್ತಾರೆ. ಆ ಪಟಾಕ್ಷಿಯ ಕಳಸದ ಜೊತೆಗೆ ರಥದ ಉತ್ತುಂಗಕ್ಕೆ ಕಟ್ಟುತ್ತಾರೆ. ದೇವರ ರಥಗಳೊಂದಿಗೆ ಕುಳಿತು ಮೇಲೆಯ ಪಟಾಕ್ಷಿಯನ್ನು ಹರಾಜು ಮಾಡುತ್ತಾರೆ. ಪಟಾಕ್ಷಿ ಯಾರಿಗಾದರು ಸಿಕ್ಕರೆ ತೇರನ್ನು ಪಾದಗಟ್ಟೆಯವರೆಗು ಎಳೆದು ಗರುಡನಿಗೆ ಕೈ ಮುಗಿದುಕೊಂಡು ತಿರುಗಿ ತೆಂಗಿನಕಾಯಿ ಹೊಡೆದು ರಥವನ್ನು ಎಳೆಯುತ್ತಾರೆ. ಮೊದಲು ಪಾದಗಟ್ಟೆಯವರೆಗು ಎಳೆಯುತ್ತಿದ್ದರು. ಆದರೆ ಈಗ ನೀರಾವರಿಯಿಂದಾಗಿ ಹೊಲದ ಬೆಳೆಗಳಿರುವುದರಿಂದ ಪಾದಗಟ್ಟೆಯ ಅರ್ಧ ಭಾಗಕ್ಕೆ ಮಾತ್ರ ಎಳೆಯುತ್ತಾರೆ. ತೇರು ಎಳೆದ ನಂತರ ದೇವರನ್ನು ಕೆಳಗಿಳಿಸಿ ಪಲ್ಲಕ್ಕಿಯಲ್ಲಿ ಉತ್ಸವ ಮೂರ್ತಿಯನ್ನು ಕೊಂಡೊಯಿಸಿಕೊಂಡು ಮೇಳದ ಸಹಿತವಾಗಿ ಗರ್ಭಗುಡಿಗೆ ಹೋಗುತ್ತಾರೆ. ನಂತರದಲ್ಲಿ ಯತಾಪ್ರಕಾರ ಲೀಲಾ ಸೇವನೆಯನ್ನು ಮಾಡುತ್ತಾರೆ.

**೪.೩ ವಿಶೇಷ ಆಚರಣೆಗಳು**

**ಬಂಡೇರಂಗನಾಥ ಸ್ವಾಮಿ**

ದೈವದ ಆಗಮನ ಇಡೀ ಜನತೆಗೆ ಒಂದು ಸಾಂಸ್ಕೃತಿಕ ಸಮಾಜವನ್ನು ಕಟ್ಟಿಕೊಟ್ಟಂತಾಗಿದೆ. ಪ್ರತಿ ವರ್ಷವು ಬಂಡೆ ರಂಗನಾಥಸ್ವಾಮಿಗೆ ಮಿನಿ ಯಡ್ರಾಮನಹಳ್ಳಿ ಗ್ರಾಮದಿಂದ ಮಿನಿಯನ್ನು ತಂದು ಒಪ್ಪಿಸಿರುತ್ತಾರೆ. ಎಲ್ಲ ಭಾಗದ ಜನರು ಈ ದೇವಾಲಯಕ್ಕೆ ಬಂದು ಯಾವುದೇ ಮೇಲು, ಕೀಳು ಎಂಬ ಭಾವನೆ ಇಲ್ಲದೆ ಎಲ್ಲರೂ ತಮ್ಮ ಭಾಗವಹಿಸಿ ಪರಿಪೂರ್ಣವಾಗಿ ಆಚರಿಸುತ್ತಾ ಬಂದಿರುತ್ತಾರೆ.

ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ವಿಶೇಷವಾಗಿ ಪೂಜೆಗಳು ಇಲ್ಲಿ ನಡೆಯುತ್ತವೆ. ಶ್ರಾವಣದ ರವಿವಾರ, ಗುರುವಾರ, ಬುಧವಾರ, ಮಂಗಳವಾರ ಇವುಗಳನ್ನು ಬಿಟ್ಟು ಶ್ರಾವಣ ಸೋಮವಾರ, ಶುಕ್ರವಾರ, ಶನಿವಾರಗಳೆಂದು ವಿಶೇಷ ಅಭಿಷೇಕ ಹಾಗೂ ರುದ್ರಾಭಿಷೇಕಗಳನ್ನು ಮಾಡುತ್ತಾರೆ. ಶ್ರಾವಣ ಮಾಸದಲ್ಲಿ ರಂಗಸ್ವಾಮಿಯ ಜೊತೆಗೆ ಪರಿಸರವನ್ನು ಪೂಜೆಸುತ್ತಾರೆ.

ತಂಬ್ರಹಳ್ಳಿ, ಬಂಡಿ ಕ್ಯಾಂಪ್ ಮುತ್ಕೂರು, ಕಿತ್ನೂರು, ತೆಲುಗೋಳಿ, ರಾಮೇಶ್ವರ ಬಂಡಿ, ಸೀಗನಹಳ್ಳಿ-೧, ಸೀಗನಹಳ್ಳಿ-೨, ಬನ್ನಿಗೋಳ, ಕೃಷ್ಣಾಪುರ, ಬಸಾಪುರ, ಬಸರಕೋಡು, ತಾಂಡ,ಚಿಲುಗೋಡು, ಯಡ್ರಾಮನಹಳ್ಳಿ, ಬಾಚಿಗೊಂಡನಹಳ್ಳಿ, ಹಂಪಾಪಟ್ಟಣ, ಹಂಪಸಾಗರ, ಕೋಡಿಹಳ್ಳಿ, ಉಪನಾಯಕಹಳ್ಳಿ, ಹಗರಿಕ್ಯಾದಿಗಳು ಈ ಹಳ್ಳಿಗಳ ಜನರಿಂದ ಜಾತ್ರೆಯು ನಡೆಯುತ್ತದೆ. ಈ ನಮ್ಮ ಎತ್ತಿನ ಬಂಡಿ ಕಾರು, ಲಾರಿ, ಟ್ರಾಕ್ಸ, ಆಟೋ, ಟೆಂಪೋ, ಮೆಟಡೋರ್, ಟ್ರಾಕಟರ್ ಬಸ್ಸು ಈ ಎಲ್ಲ ವಾಹನಗಳ ಬರುತ್ತಿದ್ದರು.

ಹೋಳಿ ಹುಣ್ಣಿಮೆಯ ದಿನದ ಸಾಯಂಕಾಲದ ೫ ಗಂಘಟೆ ರಥೋತ್ಸವ ನಡೆಯುತ್ತದೆ. ಪಲ್ಲಕಿಯಲ್ಲಿ ಮಂಗಳ ವಾಧ್ಯಗಳೂಂದಿಗೆ ದೇವರ ಮರೆವಣಿಗೆ ಹೊರಡುತ್ತದೆ. ನಂತರ ರಥವನ್ನು ಎಲ್ಲ ಜನರು ವಿಜೃಂಭಣೆಯಿಂದ ಎಳೆಯುತ್ತಾರೆ. ಮರು ದಿನ ಬ್ಯಾಟಿಗಿಡ ಇರುತ್ತದೆ. ಮರು ದಿನ ಕುಸ್ತಿ ಇರುತ್ತದೆ. ಇಲ್ಲಿ ಬಂಡೆ ರಂಗನಾಥ ಸ್ವಾಮಿ ವಿಶೇಷವಾಗಿ ಈ ಜಾತ್ರೆ ನಡೆಯುತ್ತದೆ.

**ಸಿಡಿಯಮ್ಮ**

ಅಲಸಂದಿಯ ದಾನ್ಯದ ಬೆಳೆಯನ್ನು "ಸಿಡಿ"ಯಮ್ಮ ಎಂದು ಕರೆಯುತ್ತಾರೆ. ಅಲಸಂದಿಯ ಸುಗ್ಗಿಯು ಸಗ್ಗಿ ಹೋಗು ಅಲಸಂದಿಗೆ ಸಿಡಿಯಮ್ಮ ದೇವಿ ಎನ್ನಲು ಬಿಸಿಲಿಗೆ ಓಣಗಿ ಚಟ ಚಟ ಸಿಡಿಯುವುದರಿಂದ ಈ ಹೆಸರು ಬಂದಿದೆ ಅಲಸಂದಿಗೆ ಸಿಡಿಯಮ್ಮ ಎಂದು ಕರೆದು ಸಿಡಿಯಮ್ಮನ ರೊಕ್ಕ ಹೆಚ್ಚಾಗಿ ಜಾತ್ರೆಯಲ್ಲಿ ಬಾಳ ಜೋರು ಮಾಡಕತ್ತಯಲ್ಲೆ ಎಂದು ರೈತರ ಗೆಳೆಯಂದಿರನ್ನು ಛಡಿಸಿ ಮಾತಡುತ್ತಾರೆ. ಆಹಾರದ ಬೆಳೆಗಳಾದ ಸೊಪ್ಪು, ಮಂತ್ಯ, ಮೂಲಂಗಿ ಉಳ್ಳಗಡ್ಡಿ, ಹೀರೆಕಾಯಿ, ಬೆಂಡೆಕಾಯಿ, ಬದನೆಕಾಯಿ, ಮೆನಸಿನಕಾಯಿ, ಹಾಗಲಕಾಯಿ, ಆಲುಗೆಡ್ಡೆ, ತೊಗರಿ, ನಂತರ ಮುಂತಾದ ತರಕಾರಿಗಳನ್ನು ಬೆಳೆಯುವರು.

**ಅಡಿ ಟಿಪ್ಪಣಿಗಳ**

೧. ರಮೇಶ. ಸ.ಚಿ ೨೦೧೦, ಆಚರಣೆ;ದೇಶಿಜ್ಞಾನ ಪರಂಪರೆ, ಜನಪದ ಕರ್ನಾಟಕ, ಪು,ಸಂ,೦೮

೨. ವಿರೇಶ ಬಡಿಗೇರ. ೧೯೯೯, ಗುಳ್ಳವ್ವ ಆಚರಣೆ ವಿಶ್ಲೇಷಣೆ, ಪು,೦೧

೩. ಮಂಜುನಾಥ ಬೇವಿಕಟ್ಟಿ. ೨೦೧೦, ಪರೀಕ್ಷೆ ವಿ/ಎಸ್ ಮಾನ್ಯೆವು, ಪು,೧೦೫

೪. ಸುಜಾತ ಅಕ್ಕಿ, ೨೦೧೬, ನಮ್ಮೂರು ತಂಬ್ರಹಳ್ಳಿ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ

೫. ತಿಪ್ಪೇಸ್ವಾಮಿ ಆರ್, ೨೦೦೦, ಕರ್ನಾಟಕ ಜಾತ್ರೆಗಳ ವೈಶಿಷ್ಟ್ಯ,

೬. ಹಂಪ ನಾಗರಾಜಯ್ಯ, ೧೯೮೫, ಕರ್ನಾಟಕದ ಜಾತ್ರೆಗಳು, ಪು,೧೩

೭. ಜಗನ್ನಾಥ ಹೆಬ್ಬಾಳ, ಜಾತ್ರೆಗಳು, ಪು,೨೭

# ಅಧ್ಯಾಯ-೫

## ಸಮಾರೋಪ

ಯವುದೇ ಒಂದು ಪರಿಸರದ ಸ್ಥಳೀಯ ಇತಿಹಾಸವನ್ನು ತಿಳಿಯಬೇಕಾದರೆ ತಳಮಟ್ಟದ ಅಧ್ಯಯನ ಕೈಗೊಳ್ಳುವುದು ಅವಶ್ಯಕವಾಗಿದೆ. ಗ್ರಾಮ, ಹೋಬಳಿ, ತಾಲೂಕು ಹಾಗೂ ಜಿಲ್ಲೆಗಳ ಮಟ್ಟದಲ್ಲಿ ನಡೆಯುತ್ತಿರುವ ಸ್ಥಳಿಯ ಸಂಶೋಧನೆಗಳು ಇತಿಹಾಸ ಅಧ್ಯಯನದಲ್ಲಿ ಮಹತ್ತರವಾಗಿವೆ. ಸ್ಥಳಿಯ ಅಧ್ಯಯನವು ರಾಜಕೀಯ ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳ ದಾಖಲೆ ಹಾಗೂ ಅವುಗಳ ವಿಶ್ಲೇಷಣಾತ್ಮಕ ಅಧ್ಯಯನವಾಗಿದೆ.

ತಂಬ್ರಹಳ್ಳಿಯ ಪರಿಸರ ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ಸಂಪ್ರಬಂಧದಲ್ಲಿ ತಂಬ್ರಹಳ್ಳಿಯ ಪರಿಸರದ ಸ್ಥಳೀಯ ಇತಿಹಾಸ ಹಾಗೂ ಸಂಸ್ಕೃತಿಯನ್ನು ಸಮಗ್ರವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ಬಳ್ಳಾರಿ ವಿಶಿಷ್ಟ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ಜಿಲ್ಲೆಯಾಗಿದೆ. ಈ ಜಿಲ್ಲೆಯಲ್ಲಿರುವ ಹಗರಿಬೊಮ್ಮನಳ್ಳಿ ತಾಲೂಕು ಇತರೆ ತಾಲೂಕುಗಳಿಗಿಂತ ಭೌಗೋಳಿಕವಾಗಿ ಮತ್ತು ಪ್ರಾಕೃತಿವಾಗಿ ವಿಭಿನ್ನವಾಗಿವೆ. ಇಲ್ಲಿನ ಬೆಟ್ಟಗುಡ್ಡ, ಕಲ್ಲು, ಮಣ್ಣು, ಕೆರೆ, ಮರಗಿಡಗಳಿಂದ ವಿಭಿನ್ನತೆಯಿಂದ ಕೂಡಿದೆ ಇಂಥ ಭೌಗೋಳಿಕ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದಿಂದ ಹಿಡಿದು ಆಧುನಿಕ ಕಾಲಾವಧಿಯವರೆಗೂ ನಿರಂತರವಾಗಿ ಮಾನವನ ಸಾಂಸ್ಕೃತಿಕ ಪರಂಪರೆಯನ್ನು ಕೊಂಡಿಯೋಪದಿಯಲ್ಲಿ ಸಾಗಿ ಬಂದಿರುವುದು ಗಮನಾರ್ಹ ಸಂಗತಿಯಾಗಿದೆ. ಶಿಲಾಯುಗ ಕಾಲದಿಂದ ಮಾನವ ಇಲ್ಲಿನ ನೈಸರ್ಗಿಕ ಸಂಪತ್ತನ್ನು ವ್ಯವಸ್ಥಿತವಾಗಿ ಬಳಸಿಕೊಂಡು ಜೀವನ ಸಾಗಿಸಿದ್ದ ಎಂಬುದು ದೊರೆಯುವ ಸಾಂಸ್ಕೃತಿಕ ಅವಶೇಷಗಳಿಂದ ದೃಢವಾಗಿದೆ. ಪಸ್ತುತ ಅಧ್ಯಯನ ಪ್ರದೇಶದಲ್ಲಿ ಹಂಪಾಸಾಗರವು ನವಶೀಲಾಯುಗದ ಪ್ರಸಿದ್ದ ನೆಲೆಯಾಗಿತ್ತೆಂಬ ಪುರಾತತ್ವ ಆಕರಗಳಿಂದ ಸ್ಪಷ್ಟವಾಗುತ್ತದೆ.

ಚಾರಿತ್ರಿಕವಾಗಿ ಹಲವು ಪ್ರಾಚೀನ ಕುರುವುಗಳನ್ನು ಹೊಂದಿರುವ ಪರಿಸರವು ಕೆಲವು ರಾಜಮನೆತನಗಳ ಆಳ್ವಿಕೆಯ ಕಾರ್ಯಕ್ಷೇತ್ರವಾಗಿತ್ತು. ಈ ಪರಿಸರವು ವಿವಿಧ ಚಾರಿತ್ರಿಕ ಕಾಲಘಟ್ಟಗಳಾದ ಮೌರ್ಯರು, ಶಾತವಾಹನ, ಕಂದಬ, ಚಾಲುಕ್ಯ, ರಾಷ್ಟ್ರಕೂಟ, ಯಾದವರು, ಹೊಯ್ಸಳ, ವಿಜಯನಗರ ಅರಸರು ಮತ್ತು ಹರಪನಹಳ್ಳಿ ಪಾಳೇಗಾರರು ಸೇರಿದಂತೆ ಹಲವು ರಾಜಮನೆತನದವರ ಆಳ್ವಿಕೆಗೆ ಒಳಪಟ್ಟಿರುವುದು ಗಮನಾರ್ಹ ಸಂಗತಿ.

ತಂಬ್ರಹಳ್ಳಿಯ ಪರಿಸರದಲ್ಲಿ ಪ್ರಚಲಿತವಿರುವ ಸಾಂಸ್ಕೃತಿಕ-ಧಾರ್ಮಿಕ ಆಚರಣೆಗಳು ಇಲ್ಲಿನ ಸಂಸ್ಕೃತಿ ಜನರ ಆಚಾರ-ವಿಚಾರ ಮೊದಲಾದ ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುತ್ತವೆ. ಈ ಆಚರಣೆಗಳು ಕಲ್ಯಾಣ ಚಾಲುಕ್ಯರು ಕಾಲದಿಂದಲೂ ಪರಂಪರಾಗತವಾಗಿ ನಡೆದುಕೊಂಡು ಬಂದಿವೆ ಎಂಬುದು ಶಾಸನಗಳ ಹಿನ್ನೆಲೆಯಿಂದ ಸ್ಪಷ್ಟವಾಗುತ್ತದೆ. ಇಂದಿಗೂ ಜಾತ್ರೋತ್ಸವ ಸಂದರ್ಭದಲ್ಲಿ ಶ್ರೀ ಸಾಮಾನ್ಯರು ಭಕ್ತಯ ಪ್ರತಿರೂಪವಾಗಿ ಪಾಲ್ಗೊಳ್ಳುಳ್ಳಿವುದನ್ನು ಗುರುತಿಸಲಾಗಿದೆ. ಶ್ರಾವಣಮಾಸ, ಕಾರ್ತೀಕ ಮಾಸದ ಆಚರಣೆಗಳು ಇಲ್ಲಿನ ಧಾರ್ಮಿಕ ಆಚರಣಾಂಶಗಳನ್ನು ದಾಖಲಿಸಲಾಗಿದೆ. ಮಾನವನ ಸಂಸ್ಕೃತಿಯ ವಿಕಾಸದಲ್ಲಿ ಕರ ವ್ಯವಸ್ಥೆಯನ್ನು ಆಧರಿಸಿದ ನೀರಿನ ಪಾತ್ರ ಪ್ರಧಾನವೆಂದು ತಿಳಿದು ಬರುತ್ತದೆ.

ತಂಬ್ರಹಳ್ಳಿಯ ಪರಿಸರ ದೇವಾಲಯ, ಮೂರ್ತಿಶಿಲ್ಪಗಳು, ಶಾಸನಗಳು ಇಲ್ಲಿ ಆಳ್ವಿಕೆಮಾಡಿದ ಚಾಲುಕ್ಯರು, ಹೊಯ್ಸಳ, ವಿಜಯನಗರರೋತ್ತರ ಕಾಲಘಟ್ಟಗಳಾಗಿವೆ. ಸ್ಮಾರಕಶಿಲ್ಪಗಳು ಗತಕಾಲದ ಮಾನವನ ಚಾರಿತ್ರಿಕ ಅಂಶಗಳನ್ನು ಯುದ್ಧ ಮತ್ತು ವೀರತ್ವ, ದೇಶಭಕ್ತಿ, ಸಮುದಾಯಗಳ ಚರಿತ್ರೆ, ಗ್ರಾಮ ಸಂಸ್ಕೃತಿ ಮುಂತಾದ ಅಂಶಗಳನ್ನು ತಿಳಿಸಿಕೊಡುತ್ತವೆ. ಈ ತಂಬ್ರಹಳ್ಳಿಯ ಪರಿಸರದಲ್ಲಿನ ದೇವಾಲಯಗಳ ವಾಸ್ತುಶಿಲ್ಪ ಮತ್ತು ಶಿಲ್ಪಗಳ ಕುರುಹುಗಳು ಇವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿನ ಗತಕಾಲದ ಮಾನವನ ಸಾಂಸ್ಕೃತಿಕ ಬದುಕಿನ ಹಾಗೂ ವಿಭಿನ್ನ ಬದುಕಿನ ಆಯಾಮಗಳು ಕೈಗನ್ನಡಿಗಳೆನ್ನಬಹುದು.

ಶಾಸನ ಸಾಹಿತ್ಯ, ಸ್ಮಾರಕ ಶಿಲ್ಪಗಳಿಂದ ಇತಿಹಾಸಕ್ಕೆ ಪರಿಪೂರ್ಣತೆ ದೊರೆಯುವುದಿಲ್ಲ.ಇದಕ್ಕೆ ಪೂರಕವಾಗಿ ಮೌಖಿಕ ಸಂಪ್ರದಾಯ, ನಂಬಿಕೆ ಮತ್ತು ಆಚರಣೆಗಳು ಇಂದಿಗೂ ಜೀವಂತವಾಗಿರುವ ಐತಿಹಾಸಿಕವಾದ ಕುರುಹುಗಳು, ಈ ಬಗೆಯ ಸಾಂಸ್ಕೃತಿಕ ವಿಶಿಷ್ಟತೆಗಳಿಂದ ಚರಿತ್ರೆಯ ನಿಜವಾದ ಚಿತ್ರಣ ಸಾಧ್ಯ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಬಂಡೆರಂಗನಾಥಸ್ವಾಮಿ ದೇವಾಲಯ, ಈಶ್ವರ ದೇವಾಲಯ , ಲಕ್ಷ್ಮೀ ದೇವಾಲಯ, ಕಲೇಶ್ವರ ದೇವಾಲಯ ಮುಂತಾದ ದೇವಾಲಯಗಳ ಮತ್ತು ಅವುಗಳ ಆರಾಧಕರು ಅನಾಚನವಾಗಿ ಅಳವಡಿಸಿಕೊಂಡು ಆಚರಿಸುತ್ತಿರುವಂತಹ ತಂಬ್ರಹಳ್ಳಿಯ ಪರಿಸಂದ ಸಾಂಸ್ಕೃತಿಕ ಪರಂಪರೆಯು ವಿಶಿಷ್ಟವಾದದ್ದು.

ಒಟ್ಟಿನಲ್ಲಿ 'ತಂಬ್ರಹಳ್ಳಿಯ ಪರಿಸರದ ಸಾಂಸಕ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧದಲ್ಲಿ ಪ್ರಾಗಿತಿಹಾಸದಿಂದ ಆಧುನಿಕ ಕಾಲದವರೆಗಿನ ಮಾನವನ ಸಾಂಸ್ಕೃತಿಕ ಸಂಗತಿಗಳನ್ನು, ಸಾಹಿತ್ಯಿಕ, ಪುರಾತತ್ವೀಯ, ಚಾರಿತ್ರಿಕ, ಶಾಸನಾತ್ಮಕ ಹಾಗೂ ಮೌಖಿಕ ಆಧಾರಗಳ ಹಿನ್ನಲೆಯಲ್ಲಿ ವಿವೇಚಿಸಿ. ವಿಶ್ಲೇಷಿ ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕ್ಷೇತ್ರಕಾರ್ಯ ಆಧಾರಿತವಾದ ಈ ಅಧ್ಯಯನಕ್ಕೆ ಆಕರಗಳನ್ನು ವಸ್ತುನಿಷ್ಟವಾಗಿ ಬಳಸಿಕೊಳ್ಳುವುದರಿಂದ ಮೂಲಕ ತಂಬ್ರಹಳ್ಳಿಯ ಪರಿಸರದ ಸಾಂಸ್ಕೃತಿಕ ಇತಿಹಾಸ ಸಮಗ್ರ, ಅಧ್ಯಯನಕ್ಕೆ ಒತ್ತು ನೀಡಲಾಗಿದೆ. ಈ ಪ್ರದೇಶದಲ್ಲಿ ಲಭ್ಯವಾಗಿರುವ

ಪ್ರಾಚ್ಯವಶೇಷಗಳು, ಛಾಯಾಚಿತ್ರವನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಿ, ಬಂಡೆರಂಗಸ್ವಾಮಿ ಸ್ಥಳಿಯ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿ ಸೀಮಿತವಾಗಿದ್ದರೂ ಇದರಿಂದ ಇತರೆ ಪ್ರದೇಶಗಳನ್ನು ತುಲನಾತ್ಮಕ ಅಧ್ಯಯನವನ್ನು ಕೈಗೊಳ್ಳಬಹುದು ಎಂಬುದನ್ನು ಈ ಪ್ರೌಢ ಪ್ರಬಂಧವು ತೆರೆದಿಡುತ್ತವೆ.

## ಅನುಬಂಧ

೧. ಪರಾಮರ್ಶನ ಗ್ರಂಥಗಳು

೨. ನಕ್ಷೆ ಮತ್ತು ಛಾಯಾಚಿತ್ರಗಳು

೩. ವಕ್ತೃಗಳ ವಿವರ

## ಪರಾಮರ್ಶನ ಗ್ರಂಥಗಳು

೦೧. ಅಪರ್ಣ ಕೂ.ಸ., **"ದೇವಾಲಯ ವಾಸ್ತು ಶಿಲ್ಪ ಪರಿಚಯ"**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೦೨. ಅಂಬಳಿಕೆ ಹಿರಿಯಣ್ಣ (ಸಂ) ಕನ್ನಡ ವಿಷಯ ವಿಶ್ವಕೋಶ, **"ಇತಿಹಾಸ ಮತ್ತು ಪುರಾತತ್ವ"**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

೦೩. ಪರ್ಥಾನ್ ಹಬೀಬ್ (ಮೂ), **"ಪ್ರತೀಪ ಬೆಳಗೆಲ್ ಬಿ ಪೂರ್ವಇಹಾಸ"**, ಚಿಂತನ ಪುಸ್ತಕ ಶಿರಸಿ, ೨೦೦೮.

೦೪. ಎಚ್ಚೆಸ್ಕೆ (ಸಂ), ಅವಲೋಕನ, **"ಕರ್ನಾಟಕದ ಪರಂಪರೆ ಸಮೀಕ್ಷೆ"**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

೦೫. ಕಲಬುರ್ಗಿ.ಎಂ.ಎಂ., **"ಮಾರ್ಗ ಸಂಪುಟಗಳು–೧, ೨, ೩"**, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦.

೦೬. ಗೋಪಾಲರಾವ್ ಎಚ್.ಎಸ್. (ಸಂ), **"ಕರ್ನಾಟಕ ಏಕೀಕರಣ ಇತಿಹಾಸ"**, ನವ ಕರ್ನಾಟಕ ಪ್ರಕಾಶನ ಬೆಂಗಳೂರು, ೨೦೧೪.

೦೭. ತರೀಕೆರೆ ರಹಮತ್, **"ಕರ್ನಾಟಕ ಸೂಫಿಗಳು"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೦೮. ತಾರಿಹಳ್ಳಿ ಹುಮಂತಪ್ಪ (ಸಂ), **"ನಾಯಕರ ಮಹಾಸಂಸ್ಥಾನ ಸುರಪುರ"** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೦೯. ದಿವಾಕರ ಆರ್. ಆರ್., **"ಕರ್ನಾಟಕದ ಪರಂಪರೆ, ಸಂಪುಟ–೧, ೨"**, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೪.

೧೦. ನರಸಿಂಹಮೂರ್ತಿ.ಎ.ವಿ., **"ಕನಾಟಕ ಪುರಾತತ್ವ ಕೆಲವು ಅಧ್ಯಯನಗಳು"**, ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು, ೨೦೧೦.

೧೧. ಪ್ರಭಾಕರ ಎಂ.ಎನ್. **"ದೇವಾಲಯಗಳ ವಾಸ್ತು ಶಿಲ್ಪ"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೧೨. ಬಡಿಗೇರ ವಾಸುದೇವ, **"ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ–೧"**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೧೩. ಬಟ್ ಸೂರಿ (ಸಂ) **"ಕರ್ನಾಟಕ ಶಾಸನ ಸಂಶೋಧನೆ"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೧೪. ಮಂಜುನಾಥ ಬೇವಿನಕಟ್ಟೆ, **"ಕನ್ನಡ ಜನಪದ ನಂಬಿಕೆಗಳು"**, ಜ್ಯೋತಿ ಪ್ರಕಾಶನ ಮೈಸೂರು, ೨೦೦೭.

೧೫. ಮುನಿರಾಜಪ್ಪ (ಸಂ) **"ಕರ್ನಾಟಕ ಕೆರೆ ನೀರಾವರಿ ಅಧ್ಯಯನ"**, ಇತಿಹಾಸ ಮತ್ತು ಪ್ರವಾಸೋದ್ಯಮ ವಿಭಾಗ ರೂರಲ್ ಕಾಲೇಜು, ೨೦೦೯.

೧೬. ರಮೇಶ ನಾಯಕ (ಸಂ) **"ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳು ಮರು ಚಿಂತನೆ"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೧೭. ಲಕ್ಷಣ ತೆಲಗಾವಿ, **"ಎಪ್ಪತ್ತೇಳು ಪಾಳೇಗಾರರು"**, ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ, ೨೦೧೦.

೧೮. ಲಕ್ಷಣ ತೆಲಗಾವಿ, (ಸಂ) **"ಸ್ಥಳೀಯ ಚರಿತ್ರೆ"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೧೯.ವಸು ಎಂ.ವಿ., **"ದಕ್ಷಿಣ ಭಾರತ ಅರಸು ಮನೆತನಗಳು"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨೦. ಶರ್ಮಾ. ಆರ್. ಎಸ್. **"ಪ್ರಾಚೀನ ಭಾರತ"**, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨.

೨೧. ಶಿವರುದ್ರಪ್ಪ. ಎಸ್. ಎನ್., **"ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ"**, ಪೌರಸ್ತ್ಯ ಪ್ರಕಾಶನ ಮೈಸೂರು, ೨೦೦೯.

೨೨. ಶಿವತಾರಕ ಕೆ.ಬಿ. , **"ಕನಾಟಕ ಪುರಾತತ್ವ ನೆಲೆಗಳು"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨೩. ಶ್ರೀನಿವಾಸ ಪಾಡಿಗಾರ, **"ಭಾರತೀಯ ಇತಿಹಾಸ ಶಾಸನ ಆಕರಗಳು"**, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ. ೨೦೦೪,

೨೪. ಶೇಷಗಿರಿ.ಎನ್.ಎಲ್. (ಸಂ), **"ಸೂರ್ಯನಾಥಯು , ಕಾಮತ್ (ಸಂ) ಬೆಂಗಳೂರು ದರ್ಶನ ಸಂಪುಟ–೧"**, ಉದಯಭಾನು ಕಲಾ ಸಂಘ, ಬೆಂಗಳೂರು, ೨೦೦೫

೨೫. ಷೇಕ ಆಲಿ (ಸಂ), ಸಂದರ ಅ(ಸಂ), **"ಕರ್ನಾಟಕ ಚರಿತ್ರೆ ಸಂಪುಟ–೧"**, ಪ್ರಸಾಂರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೨೬. ಸುಂದರರಾವ್ ಬ,ನ, ೨೦೧೧, ಬೆಂಗಳೂರಿನ ಇತಿಹಾಸ, (ಸ್ಥಾಪನೆಯಿಂದ ಹಿಡಿದು ಸ್ವರಾಜ್ಯ ಲಭಿಸುವವರೆಗೆ) ಅಂಕಿತ ಪುಸ್ತಕ ಬೆಂಗಳೂರು

೨೭. ಸುಧಾಮಣಿ ಬಿ.ವಿ, ೨೦೧೯, ದಳವಾಯಿ ನಂಜರಾಜಯ್ಯನ ಕಾಲದ ಮೈಸೂರು, ಅನನ್ಯ ಪ್ರಕಾಶನ ಮೈಸೂರು

**ಸಂಚಿಕೆಗಳು**

೧. ಸೂರ್ಯನಾಥ ಕಾಮತ, ಕೃಷ್ಣಮೂರ್ತಿ ಪಿ.ವಿ (ಸಂ), ೧೯೯೫, ಇತಿಹಾಸ ದರ್ಶನ ಸಂ ೧೦, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು

೨. ಸೂರ್ಯನಾಥ ಕಾಮತ, ಕೃಷ್ಣಮೂರ್ತಿ ಪಿ.ವಿ (ಸಂ) ೧೯೯೩, ಇತಿಹಾಸ ದರ್ಶನ ಸಂ ೧೧, ಕರ್ನಾಟಕ ಇತಿಹಾಸ ಅಕಾಡಿಮಿ ಬೆಂಗಳೂರು

೩. ನಾಗರಾಜ ಎಂ.ಜಿ, ಕೃಷ್ಣಮೂರ್ತಿ ಪಿ.ವಿ (ಸಂ) ೧೯೯೭, ಇತಿಹಾಸ ದರ್ಶನ ಸಂ ೧೨, ಕರ್ನಾಟಕ ಇತಿಹಾಸ ಅಕಾಡಿಮಿ ಬೆಂಗಳೂರು

೪. ನಾಗರಾಜ ಎಂ.ಜಿ, ಕೃಷ್ಣಮೂರ್ತಿ ಪಿ.ವಿ, (ಸಂ) ೧೯೯೮, ಇತಿಹಾಸ ದರ್ಶನ ಸಂ ೧೩, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು

೫. ನಾಗರಾಜ ಎಂ.ಜಿ ಕೃಷ್ಣಮೂರ್ತಿ ಪಿ.ವಿ, (ಸಂ) ೨೦೦೦, ಇತಿಹಾಸ ದರ್ಶನ ಸಂ ೧೫, ಕರ್ನಟಕ ಇತಿಹಾಸ ಅಕಾಡೆಮಿ ಬೆಂಗಳೂರು.

೬. ಗೋಪಾಲರಾವ್ ಎಚ್.ಎಸ್, ಅಬ್ದುಲ್ ಬಷೀರ್, ಜಿ. ಕನಕಸಿರಿ, ೧೯೯೯, ಅಖಿಲ ಭಾರತ ೬೭ ನೇಯ ನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೭. ಬೈರೇಗೌಡ ಎಂ. ತಿಮ್ಮಯ್ಯ ತಾ.ಸಿ, ಅರ್ಕಾವತಿ, ೧೯೯೯, ಅಖಿಲ ಭಾರತ ೬೭ನೇಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

## ತಂಬ್ರಹಳ್ಳಿಯ ಜನಸಂಖ್ಯೆ ೨೦೧೧ರ ಪ್ರಕಾರ

| ಕ್ರ.ಸಂ | ಜಾತಿ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಬ್ರಾಹ್ಮಣ | ೨೨ | ೧೮ | ೪೦ |
| ೨ | ವೀರಶೈವ | ೯೧೦ | ೮೩೦ | ೧೭೪೦ |
| ೩ | ವೈಶ್ಯ | ೦೬ | ೦೪ | ೧೦ |
| ೪ | ದೇವಾಂಗ | ೩೦ | ೨೮ | ೫೮ |
| ೫ | ವಿಶ್ವಕರ್ಮ | ೪೫ | ೪೦ | ೮೫ |
| ೬ | ಕುರುಹಿನಶೆಟ್ಟಿ | ೩೨೦ | ೩೫೦ | ೬೭೦ |
| ೭ | ಮಡಿವಾಳ | ೧೯೦ | ೧೮೦ | ೩೭೦ |
| ೮ | ಪಿಂಜಾರ | ೨೦ | ೧೪ | ೩೪ |
| ೯ | ಜೈನ | ೦೮ | ೦೬ | ೧೪ |
| ೧೦ | ಕ್ರೈಸ್ತ | ೦೪ | ೦೪ | ೦೮ |
| ೧೧ | ಬೆಸ್ತ | ೪೦ | ೩೫ | ೭೫ |
| ೧೨ | ಈಡಿಗ | ೦೬ | ೦೫ | ೧೧ |
| ೧೩ | ವಾಲ್ಮೀಕಿ | ೩೮೦ | ೩೨೦ | ೭೦೦ |
| ೧೪ | ಕೊರವ | ೧೫ | ೧೦ | ೨೫ |
| ೧೫ | ಕಿಳ್ಳೇಕ್ಯಾತ | ೦೮ | ೦೭ | ೧೫ |
| ೧೬ | ಲಂಬಾಣಿ | ೦೪ | ೦೪ | ೦೮ |
| ೧೭ | ಭೋವಿ | ೧೦ | ೦೮ | ೧೮ |
| ೧೮ | ಛಲವಾದಿ | ೧೫ | ೧೫ | ೩೦ |
| ೧೯ | ಹರಿಜನ | ೩೫೦ | ೨೦೦ | ೫೫೦ |
| ಒಟ್ಟು | | ೨೮೧೩ | ೨೬೪೮ | ೫೪೧೬ |

# ನಕ್ಷೆ ಮತ್ತು ಛಾಯಾಚಿತ್ರಗಳು




ಸಿರುಗುಪ್ಪಾ
Siruguppa
Hosapete
Bellari
ಬಳ್ಳಾರಿ
Hagari
Bommanahalli
ಹಗರಿ
ಬೊಮ್ಮನಹಳ್ಳಿ
Sandur
ಸೊಂಡೂರ
Hadagali
ಹಡಗಲಿ
Kudligi
ಕೂಡ್ಲಿಗಿ

# ಬಿಂಟಿರಂಗನಾಥ ಸ್ವಾಮಿ ದೇವಾಲಯ.





ಬಂಡೇರಂಗನಾಥ ದೇವಾಲಯದ ಮೂರ್ತಿ



ಲಕ್ಷ್ಮೀ ದೇವಾಲಯ, ತಂಬ್ರಹಳ್ಳಿ



ದೀಪದ ಸ್ಥಂಭ



ಬಂಡೇರಂಗನಾಥ ದೇವಾಲಯದ ಗೋಪುರ



ಗುಡ್ಡದ ಮೇಲಿನ ವಿಜಯಮಗರ ಶೈಲಿಯ ಗಾಳಿಗೋಪುರ

ಪುಷ್ಕರಣಿ

# ವಕ್ತೃಗಳ ವಿವರ

ತಂಬ್ರಹಳ್ಳಿಯ ಗ್ರಾಮ ಸಾಂಸ್ಕೃತಿಕ ಅಧ್ಯಯನ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಈ ಕೆಳಕಂಡ ವಕ್ತೃಗಳನ್ನು ಸಂದರ್ಶಿಸಿ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದ ಮಾಹಿತಿಯನ್ನು ಪಡೆಯಲಾಗಿದೆ.

| ಕ್ರಸಂ | ಹೆಸರು | ವಯಸ್ಸು | ವೃತ್ತಿ | ಸ್ಥಳ |
|---|---|---|---|---|
| ೧ | ಟಿ. ವಿಶ್ವನಾಥರಾವ್ | ೭೬ | ಶ್ಯಾನುಭೋಗರು | ತಂಬ್ರಹಳ್ಳಿ |
| ೨ | ಕಿನ್ನಾಳ ತೋಟಪ್ಪ | ೭೭ | ಮುಖ್ಯೋಪಾಧ್ಯಯರು | ತಂಬ್ರಹಳ್ಳಿ |
| ೩ | ಅಕ್ಕಿ ಕೊಟ್ರಪ್ಪ | ೬೮ | ವ್ಯಾಪಾರ | ತಂಬ್ರಹಳ್ಳಿ |
| ೪ | ಡಿ. ದಿಂಡಿಬಸಪ್ಪ | ೮೦ | ಕೃಷಿ | ತಂಬ್ರಹಳ್ಳಿ |
| ೫ | ಕಿನ್ನಾಳ ಬಸಮ್ಮ | ೬೭ | ಗೃಹಿಣಿ | ತಂಬ್ರಹಳ್ಳಿ |
| ೬ | ಹುರಕಡ್ಲಿ ಶಿವಕುಮಾರ | ೪೦ | ಕೃಷಿ | ಬಾಚಿಗೊಂಡನಹಳ್ಳಿ |
| ೭ | ಹೆಚ್. ಕೃಷ್ಣಮೂರ್ತಿರಾವ್ | ೬೫ | ಶಿಕ್ಷಕರು | ತಂಬ್ರಹಳ್ಳಿ |
| ೮ | ಪೂಜಾರಿ ಈರಣ್ಣ | ೭೨ | ಪೂಜಾರಿ | ತಂಬ್ರಹಳ್ಳಿ |
| ೯ | ಕಿನ್ನಾಳ ರವೀಂದ್ರನಾಥ | ೪೫ | ವ್ಯಾಪಾರ | ತಂಬ್ರಹಳ್ಳಿ |
| ೧೦ | ಸುಣಗಾರ ಮಂಜುನಾಥ | ೪೦ | ಸರ್ಕಾರಿ ನೌಕರರು | ತಂಬ್ರಹಳ್ಳಿ |

